# ಹರಿದಾಸರು ಸ್ತುತಿಸಿದ
# ಮಂತ್ರಾಲಯ ಮಠದ ಯತಿವರೇಣ್ಯರು

(ಪ್ರಸ್ತುತ ಪೀಠಸ್ಥ ಶ್ರೀ ಸುಶಮೀಂದ್ರರ ವರೆಗೆ)

ಯತಿವರ್ಯರುಗಳ ಚರಿತ್ರ ಸಹಿತ

# ಹರಿದಾಸರು ಸ್ತುತಿಸಿದ
# ಮಂತ್ರಾಲಯ ಮಠದ ಯತಿವರೇಣ್ಯರು

## (ಪ್ರಸ್ತುತ ಪೀಠಸ್ಥ ಶ್ರೀ ಸುಶಮೀಂದ್ರರ ವರೆಗೆ)

- ಯತಿವರ್ಯರುಗಳ ಚರಿತ್ರ ಸಹಿತ -

ಸಂಪಾದಕ
ಡಾ. ಶ್ರೀನಿವಾಸ ಹಾವನೂರ

ಪ್ರಕಾಶಕರು
ಹಾವನೂರ ಶ್ರೀವಾದಿರಾಜ ಮೃತ್ತಿಕ ವೃಂದಾವನ ಮಠ
ಮತ್ತು
ಶ್ರೀ ಕನಕ ಸಾಹಿತ್ಯ ಪ್ರತಿಷ್ಠಾನ (ರಿ.) ಬೆಂಗಳೂರು

**HARIDASARU STUTISIDA MANTRALAYA MATHADA YATIVARENYARU :** A collection of Keertans on the Swamijis of Mantralaya Matha; along with their biographical sketches, etc. Ed. by : Dr. Shrinivas Havanur. Pub. by : Shri Vadiraja Mrittika Vrindavana Matha, Havanur and Kanaka Sahitya Pratishthana Bangalore.

Pages : xvi + 184, August 2002.

ಬೆಲೆ : ರೂ. ೯೦=೦೦

ಕೃತಿ-ಸ್ವಾಮ್ಯ : ಸಂಪಾದಕರು

ಪ್ರತಿಗಳ ಲಭ್ಯತೆ :
**ಡಾ. ಶ್ರೀನಿವಾಸ ಹಾವನೂರ**
೩೬, ವಿನಾಯಕ ಲೇಔಟ್, ವಿಜಯನಗರ
ಬೆಂಗಳೂರು - ೫೦, ದೂರವಾಣಿ : ೩೩೮೪೫೨೯

**ಕನಕ ಸಾಹಿತ್ಯ ಪ್ರತಿಷ್ಠಾನ (ರಿ.)**
೨೭೨, ೧ನೇ ಹಂತ, ೫ನೇ ಮುಖ್ಯರಸ್ತೆ
ಮಂಜುನಾಥನಗರ, ಬೆಂಗಳೂರು - ೫೬೦ ೦೧೦

ಪ್ರತಿಗಳು ಬೆಂಗಳೂರಿನ ವೇದಾಂತ ಬುಕ್ ಹೌಸ್‌ನಲ್ಲಿಯೂ, ಮಂತ್ರಾಲಯದಲ್ಲಿಯ ಶ್ರೀಮಠದ ಪುಸ್ತಕ ಭಂಡಾರದಲ್ಲಿಯೂ, ಶ್ರೀ ರಾಘವೇಂದ್ರರ ವೃಂದಾವನವಿರುವ ಪ್ರಮುಖ ಮಠಗಳಲ್ಲಿಯೂ ದೊರೆಯುತ್ತವೆ.

ಅಕ್ಷರ ವಿನ್ಯಾಸ :
ಪ್ರಸಾಧನ ಕಂಪ್ಯೂಟರ್ಸ್, ಮಂಗಳೂರು

ಮುದ್ರಣ :
**ವಿಶ್ವಾಸ್ ಪ್ರಿಂಟ್ಸ್**
ನಂ. ೨೩, ೩ನೇ ಕ್ರಾಸ್, ನಂಜಾಂಬ ಅಗ್ರಹಾರ
ಚಾಮರಾಜಪೇಟೆ, ಬೆಂಗಳೂರು - ೧೮
ದೂರವಾಣಿ : ೬೬೦೬೦೭೭

# ಅರ್ಪಣೆ

ಹರಿದಾಸ ಸಾಹಿತ್ಯದ ಪ್ರತೋದಕರಾದ

◆ ಶ್ರೀ ವಾದಿರಾಜರು ◆ ಶ್ರೀ ರಾಘವೇಂದ್ರರು ◆ ಶ್ರೀ ಸತ್ಯಬೋಧರು

ಈ ಮಹಾನ್ ಯತಿಗಳ ಪಾದಸನ್ನಿಧಿಗೆ

# ಶ್ರೀ ಶ್ರೀ ಸುವಿದ್ಯೇಂದ್ರತೀರ್ಥ ಶ್ರೀ ಪಾದಂಗಳವರ ಆಶೀರ್ವಚನ

॥ ಶ್ರೀಮನ್ಮೂಲರಾಮೋ ವಿಜಯತೇ ॥

'ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಂತ್ವಿತಿ' ಎಂದು ಭಗವಂತನು ಹೇಳಿದಂತೆ, ಭಗವಂತನೇ ಅನುಗ್ರಹ ಮಾಡುವುದಾದರೂ ಗುರುಮುಖೇನವೇ ಅನುಗ್ರಹ ಮಾಡುತ್ತಾನೆ ಮತ್ತು 'ಗುರುಪ್ರಸಾದೋ ಬಲವಾನ್ ನ ತಸ್ಮಾದ್ ಬಲವತ್ತರಂ' ಎಂಬ ಭಾಷ್ಯೋದಾಹೃತ ಪ್ರಮಾಣವಚನದಂತೆ ಗುರುಗಳ ಅನುಗ್ರಹ ಸಂಪಾದನೆ ಮಾಡುವುದು ಬಹಳ ಮುಖ್ಯ. ಹಾಗಾಗಿ ಹಾಡಿ ಹೊಗಳುವ, ಮಾಹಾತ್ಮ್ಯಗಳನ್ನು ತಿಳಿಸುವ ಸ್ತೋತ್ರಗಳನ್ನು ಮಾಡಬೇಕು. ಸಂಸ್ಕೃತದಲ್ಲಿರುವ ಸ್ತೋತ್ರಗಳನ್ನು ಎಲ್ಲರಿಗೂ ಮಾಡಲು ಕಷ್ಟವಾದ್ದರಿಂದ ಹರಿದಾಸರು ಕನ್ನಡದಲ್ಲಿ ಅನೇಕ ಹಾಡುಗಳನ್ನು ಮಾಡಿದ್ದಾರೆ. ಪ್ರಸಿದ್ಧ ಸಂಶೋಧಕರೂ ವಿದ್ವಾಂಸರೂ ಆದ ಹಾವನೂರ ಶ್ರೀನಿವಾಸರು ದಾಸರ ಪದಗಳನ್ನು ಸಂಗ್ರಹಿಸಿ ಅವಗಳಿಗೆ ಪೀಠಿಕೆಯನ್ನೂ ಕೊಟ್ಟು ಭಕ್ತವೃಂದಕ್ಕೆ ಮಹದುಪಕಾರವನ್ನು ಮಾಡಿದ್ದಾರೆ. ಅವರಿಗೆ ನಮ್ಮ ಉಪಾಸ್ಯಮೂರ್ತಿಯಾದ ಮೂಲ ರಘುಪತಿ ವೇದವ್ಯಾಸ ದೇವರು ಶ್ರೇಯಸ್ಸನ್ನುಂಟು ಮಾಡಲೆಂದು ಪ್ರಾರ್ಥಿಸುತ್ತೇವೆ.



# ಸಂಪಾದಕೀಯ

ಸೋದೆಯ ಶ್ರೀ ವಾದಿರಾಜ ಯತಿಗಳನ್ನೂ ಸವಣೂರಿನ ಶ್ರೀ ಸತ್ಯಬೋಧತೀರ್ಥರನ್ನೂ ಸ್ತುತಿಸಿದಂಥ ಹರಿದಾಸರುಗಳ ಹಾಡುಗಳ ಸಂಗ್ರಹಗಳನ್ನು ಹೊರತಂದ ಮೇಲೆ, ಮಂತ್ರಾಲಯ ಮಠದ ಯತಿವರ್ಯರುಗಳ ಮೇಲಿನ ಹಾಡುಗಳನ್ನು ಹುಡುಕುತ್ತಾ ಇದ್ದೆ. ಮಾಧ್ವಯತಿ ಪರಂಪರೆಯಲ್ಲಿ ಅನೇಕಾನೇಕ ಮಹಾಮಹಿಮರು ಆಗಿಹೋದರೂ, ಅವರೆಲ್ಲರ ಮೇಲೆಯೂ ಹಾಡುಗಳು ರಚಿತವಾಗಿಲ್ಲ; ಅದಕ್ಕೆ ಇಂಥದೇ ಕಾರಣವೆಂಬುದಿಲ್ಲ. ಸುದೈವಕ್ಕೆ 'ಲಕುಮೀಶ' ಮುದ್ರಿಕೆಯ ಕೀರ್ತನ ಸಂಗ್ರಹ ದೊರಕಿತು. ಶ್ರೀ ಮಂತ್ರಾಲಯ ಮಠದ ಬಹುತರ ಎಲ್ಲ ಯತಿಗಳ ಮೇಲೆ ಅವರ ಕೃತಿಗಳಿದ್ದುವು. ಜೊತೆಗೆ ಶ್ರೀ ವಿಜಯದಾಸರಿಂದ ಹಿಡಿದು, ಇಪ್ಪತ್ತನೆಯ ಶತಮಾನದ ಇನ್ನು ಹಲವು ಹರಿದಾಸರ ರಚನೆಗಳೂ ಇದ್ದುವು. ಅವನ್ನೆಲ್ಲ ಸಂಗ್ರಹಿಸಿ ಕೊಟ್ಟದ್ದಾದರೆ ಮಂತ್ರಾಲಯ (ವಿದ್ಯಾ) ಮಠದ ಒಂದು ಪೂರ್ಣ ಚಿತ್ರಣವೇ ದೊರೆಯುವುದಲ್ಲ! ಹಾಗೆ ಯೋಚಿಸಿ ಸಂಪಾದಿಸತೊಡಗಿದೆ.

ಈ ಯತ್ನದಲ್ಲಿ ಮೊದಲಿನಿಂದ ನನಗೆ ಆಸರೆ ಇತ್ತವರು ವಿದ್ವಾನ್ ಶ್ರೀ ಕುರಡಿ ಅನಂತಾಚಾರ್ಯರು. ಇವರು ಇನ್ನಾರೂ ಅಲ್ಲ; ಲಕುಮೀಶರ ತಮ್ಮ. ಅದರಂತೆ ಕೀರ್ತನಗಳ ಪಠ್ಯವನ್ನು ಶ್ರೀ ಎ. ಎನ್. ಅನಂತಸ್ವಾಮಿರಾಯರು ಪರಿಷ್ಕರಿಸಿ ಕೊಟ್ಟಿದ್ದಾರೆ. ಆಮೇಲೆ ಕೀರ್ತನೆಗಳನ್ನು ಪ್ರತಿಮಾಡಿ ಹೊಂದಿಸಿ ಕೊಡುವ ಕಾರ್ಯದಲ್ಲಿ ನೆರವಾದವರು ಶ್ರೀ ಸಿ. ಎಸ್. ಗೋವಿಂದರಾಯರು. ಕೆಲವು ಯತಿವರ್ಯರನ್ನು ಸ್ತುತಿಸಿದ್ದ ಹಾಡುಗಳು ಇವೆಯೆಂದು ಕೇಳಿದ್ದೆ. ದೊರೆತಿರಲಿಲ್ಲ. ಅಂಥ ಅಪೂರ್ವ ಹಾಡುಗಳನ್ನು ಶ್ರೀ ಎ. ವಿ. ಪಂಚಮುಖಿ ಹಾಗೂ ಶ್ರೀ ರಾಜಾ ಜಿ. ಪವಮಾನಾಚಾರ್ಯರು ಒದಗಿಸಿ ಕೊಟ್ಟಿದ್ದಾರೆ.

ಹಾಡುಗಳ ಜೊತೆಗೆ ಯತಿವರೇಣ್ಯರ ಕಿರುಚರಿತ್ರೆಯನ್ನೂ ಕೊಡುವುದು ಸೂಕ್ತವೆನಿಸಿತು. ಈ ವಿಷಯದಲ್ಲಿ ಡಾ. ಎಚ್. ಕೆ. ವೇದವ್ಯಾಸಾಚಾರ್ಯರ ಸುಪ್ರಸಿದ್ಧ 'ಗುರುಚರಿತೆ'ಯನ್ನು ಆಧಾರವಾಗಿಟ್ಟುಕೊಂಡು ಯತಿಗಳ ಪರಿಚಯ ಮಾಡಿಕೊಡಲಾಗಿದೆ.

ಇನ್ನೊಂದು ವಿಶೇಷತೆಯೆಂದರೆ, ಶ್ರೀ ವಿಜಯೀಂದ್ರಾದಿ ಕೆಲವು ಯತಿವರ್ಯರುಗಳೇ ಕೀರ್ತನೆ ರಚಿಸಿದ್ದಾರಲ್ಲವೆ. ನಮ್ಮ ಶ್ರೀ ರಾಯರ 'ಇಂದು ಎನಗೆ ಗೋವಿಂದ' ಎಂಬುದು ಸಾಕ್ಷಾತ್ತಾಗಿ ಇದೆ. ಇವೆಲ್ಲವನ್ನು ಅನುಬಂಧವಾಗಿ ಕೊಡಬೇಕೆನಿಸಿತು; ಕೊಟ್ಟಿದೆ.

ನಮ್ಮ ಪೀಠಾಧಿಪತಿಗಳ ವಿದ್ವತ್ತು, ವಾದವೈಖರಿ ಅಷ್ಟೇ ಗಣನೀಯವಾದದ್ದು. ಈ ಹಿಂದೆ ಅವನ್ನು ಯಾರಾದರೂ, (ಈಗಿನಂತೆ) ರೆಕಾರ್ಡ್ ಮಾಡಿದ್ದಿದ್ದರೆ! ಸುದೈವಕ್ಕೆ ಶ್ರೀ ವಿಜಯೀಂದ್ರರ ವಾದವೈಖರಿಯನ್ನು ಅವರ ಗ್ರಂಥಗಳಿಂದಲೇ ಗುರುತಿಸಿ, ಕಥನ ಸಂಭಾಷಣಾ ರೂಪದಲ್ಲಿ ಮಾನ್ಯ ರಾಜಾ ಎಸ್. ಗುರುರಾಜಾಚಾರ್ಯರು ತಮ್ಮ 'ಅಜಯ್ಯ ವಿಜಯೀಂದ್ರರು' ಗ್ರಂಥದಲ್ಲಿ ಕೊಡಮಾಡಿದ್ದಾರೆ. ಈ ವಾದ-ಮಾದರಿ ಈಗಿನವರಿಗೆ

ತಿಳಿಯುವ ಉದ್ದೇಶದಿಂದ ಇನ್ನೊಂದು ಅನುಬಂಧದಲ್ಲಿ ಕೊಟ್ಟಿದೆ. ಹೀಗಿದು ಮಾಮೂಲಿಯ ಹರಿದಾಸರ ಕೀರ್ತನ ಸಂಗ್ರಹವಾಗದೇ, ಸೂಜ್ಞ ವಿಷಯಗಳನ್ನೊಳಗೊಂಡ ವಿಶಿಷ್ಟ ಗ್ರಂಥವಾಗಿ ರೂಪಿಸಲ್ಪಟ್ಟಿದೆ.

ಹಸ್ತಪ್ರತಿ ಸಿದ್ಧವಾದ ಮೇಲೆ ಬೆಂಗಳೂರಿನ ಎರಡು ರಾಯರ ಮಠಗಳ ಅಧ್ವರ್ಯುಗಳಾದ ಶ್ರೀ ಎಸ್. ಕೃಷ್ಣ ಹಾಗೂ ಶ್ರೀ ಹಾವೇರಿ ರಾಘವೇಂದ್ರಾಚಾರ್ಯ ಮುಂತಾದವರಿಗೆ ತೋರಿಸಿದಾಗ ಒಂದೆರಡು ಸ್ಖಾಲಿತ್ಯಗಳನ್ನು ತೋರಿಸಿಕೊಟ್ಟಿದ್ದುದು ಒಳ್ಳೆಯದಾಯಿತು.

ಹೊಸ ಶ್ರೀಗಳಾದ ಶ್ರೀ **ಸುವಿದ್ಯೇಂದ್ರತೀರ್ಥರ** ಪರಿಚಯ ಅಷ್ಟಾಗಿ ಇರಲಿಲ್ಲ. ಆದಾಗ್ಯೂ 'ಆಶೀರ್ವಚನ'ವನ್ನು ಬೇಡಿದೆ. ದಯಪಾಲಿಸಿದ್ದಾರೆ. ಆ ಮೂಲಕ ಈ ಕೈಂಕರ್ಯದಲ್ಲಿ ಪೂಜ್ಯ ಶ್ರೀ ಸುಶಮೀಂದ್ರ ಗುರ್ವಂತರ್ಗತ ಶ್ರೀ ರಾಘವೇಂದ್ರ ಮಹಾಮಹಿಮರ ಆಶೀರ್ವಾದವನ್ನೂ ಪಡೆದಿರುವೆನಾಗಿ ನಂಬಿದ್ದೇನೆ.

ಮಂಗಳೂರಿನ ಪ್ರಸಾಧನ ಕಂಪ್ಯೂಟರ್ಸ್‌ರವರು ನಿಷ್ಠೆಯಿಂದ ಅಕ್ಷರ ಮುದ್ರಣವನ್ನು ಮಾಡಿಕೊಟ್ಟರು. ಆದರೆ ಪ್ರಕಟನೆಯ ವಿಚಾರವಾಗಿ ಯೋಚನೆಗೊಳಗಾದಾಗ ಅಮೇರಿಕೆಯಲ್ಲಿರುವ ಶ್ರೀ ಜಯರಾಜ ಗಲಗಲಿ ಮತ್ತು ಶ್ರೀ ಪಿ. ಆರ್. ಮುಕುಂದ ಅವರು ತಾವಾಗಿ ಆರ್ಥಿಕ ನೆರವನ್ನು ನೀಡಲು ಮುಂದಾದರು. ಪ್ರಕಾಶನ ಕಾರ್ಯದಲ್ಲಿ ಶ್ರೀ ಮುತ್ತಣ್ಣ ತೋಂಟಾಪುರರು ಜೊತೆಗೂಡಿದ್ದುದು ದೈವಾನುಗ್ರಹವೇ ಎನ್ನಬೇಕು. ಮುದ್ರಣ ಕಾರ್ಯದ ಸೊಗಸಂತೂ ಕಣ್ಣಿಗೆ ಕಾಣುವಂತಹದೇ. ಅದರ ಶ್ರೇಯಸ್ಸು ವಿಶ್ವಾಸ್ ಪ್ರಿಂಟ್ಸ್‌ನ ಶ್ರೀ ವೆಂಕಟೇಶರದು.

ಇವರೆಲ್ಲರನ್ನು ಮನಸಾರೆ ಅಭಿವಂದಿಸುವೆ.

**ಶ್ರೀನಿವಾಸ ಹಾವನೂರ**
(ಸಂಪಾದಕ)

ಬೆಂಗಳೂರು
ಆಗಸ್ಟ್ ೨೦೦೨

# ಹರಿದಾಸರು ಸ್ತುತಿಸಿದ ಮಂತ್ರಾಲಯ ಮಠದ ಯತಿವರೇಣ್ಯರು

## - ಪ ರಿ ವಿ ಡಿ -


ಪು. ಸಂ.

ಆಶೀರ್ವಚನ - ಶ್ರೀ ಶ್ರೀ ಸುವಿದ್ಯೇಂದ್ರತೀರ್ಥರಿಂದ

ಸಂಪಾದಕೀಯ

ಹರಿದಾಸರುಗಳ ಪರಿಚಯ ೯

ಶ್ರೀಗುರು ಪರಂಪರೆ ೧೯

೧. ಗುರುಗಳ ನೆನೆವೆನನುದಿನ ನಾ - ಪ್ರಾಣೇಶವಿಠಲ

೨. ಸ್ಮರಿಸು ಸಂತತ ಗುರುಚರಣ - ಲಕುಮೀಶ

ಆದ್ಯ ಯತಿಗಳು ( ರಾಮಚಂದ್ರತೀರ್ಥರ ವರೆಗೆ )

ಶ್ರೀ ವಿಬುಧೇಂದ್ರತೀರ್ಥರು ( ೧೪೩೫-೧೪೯೦ ) ೨೭

೩. ತಿರುನೆಲ್ವೇಲಿ ಮೆರೆವ ಶ್ರೀ ವಿಬುಧೇಂದ್ರರ - ಲಕುಮೀಶ

ಶ್ರೀ ಜಿತಾಮಿತ್ರತೀರ್ಥರು ( ೧೪೯೦-೧೪೯೨ ) ೩೦

೪. ವಂದನೆ ಮಾಡಿರೈ ಯತಿಕುಲಚಂದ್ರನ ಪಾಡಿರೈ - ರಂಗವಿಠಲ

೫. ನೋಡಿದ್ಯಾ ಇವರ ಪಾದ ಕೊಂಡಾಡಿದ್ಯಾ - ಲಕುಮೀಶ

ಶ್ರೀ ರಘುನಂದನತೀರ್ಥರು ( ೧೪೯೨-೧೫೦೪ ) ೩೫

೬. ಪಂಪಾಕ್ಷೇತ್ರದಿ ಇರುವಾ ಶ್ರೀ ರಘುನಂದನ - ಲಕುಮೀಶ

ಶ್ರೀ ಸುರೇಂದ್ರತೀರ್ಥರು ( ೧೫೦೪-೧೫೭೫ ) ೩೭

೭. ಶ್ರೀ ಸುರೇಂದ್ರರ ಪಾದ ತೋಷದಲಿ ತುತಿಸೆ - ಲಕುಮೀಶ

ಪು. ಸಂ.

ಶ್ರೀ ವಿಜಯೀಂದ್ರತೀರ್ಥರು ( ೧೫೩೯ - ೧೬೧೪ ) ೩೦
೮. ಶ್ರೀ ವಿಜಯೀಂದ್ರ ಯತಿಯ ನಾ ಕಂಡೆ ಮುದಗೊಂಡೆ - ಗುರುಪುರಂದರವಿಠಲ
೯. ವಿಜಯೀಂದ್ರ ಮುನೀಂದ್ರರೆಂಬಾಶ್ಚರ್ಯದ ಗಜೇಂದ್ರ - ಗುರುಮಧ್ವಪತಿವಿಠಲ
೧೦. ಸೂರ್ಯಾ ಸುಗುಣಾರ್ಯಾ ಶ್ರೀ ವಿಜಯೀಂದ್ರಾರ್ಯಾ - ಪ್ರಸನ್ವೆಂಕಟ
೧೧. ಕರವೊಡ್ಡಿ ಬೇಡುವೆ ಗುರು ವಿಜಯೀಂದ್ರ - ವಿಜಯ(ಲಕ್ಷ್ಮೀ)ನರಸಿಂಹ
೧೨. ವಿಜಯ ಮೂರುತಿ ಪೊರೆಯೊ ವಿಜಯೀಂದ್ರ - ಕಮಲೇಶ
೧೩. ವಿಜಯೀಂದ್ರ ಮೌನಿಯ ಶ್ರೀ ವಾರಿಜಾಂಘ್ರಿಗಳ - ಲಕುಮೀಶ

ಶ್ರೀ ಸುಧೀಂದ್ರತೀರ್ಥರು ( ೧೬೧೪ - ೧೬೨೧ ) ೩೧
೧೪. ಶ್ರೀ ಸುಧೀಂದ್ರತೀರ್ಥ ಯತಿರಾಜರ ಚರಣ - ಪ್ರಸನ್ನಶ್ರೀನಿವಾಸ

ಶ್ರೀ ರಾಘವೇಂದ್ರ ಯತಿವರರು ( ೧೬೨೧-೧೬೭೧ ) ೩೬
೧೫. ರಾಘವೇಂದ್ರ ಸಲಹೋ ಗುಣಸಾಂದ್ರ - ಶ್ರೀ ವಿದ್ಯಾರತ್ನಾಕರರು
೧೬. ವರ ಮಂತ್ರಾಲಯದೊಳು ಘನವಾಗಿ ನೆಲಸಿರ್ಪ - ಶ್ರೀ ವಿಶ್ವೇಂದ್ರತೀರ್ಥರು
೧೭. ಯತಿವರ ನಿಮ್ಮನು ಸ್ತುತಿಪ - ಶ್ರೀ ವಿದ್ಯಾಪ್ರಸನ್ನರು
೧೮. ಕರುಣಿಸೊ ಶ್ರೀ ಗುರುರಾಜ - ಶ್ರೀ ಪ್ರದ್ಯುಮ್ನತೀರ್ಥರು

ಶ್ರೀ ಯೋಗೀಂದ್ರತೀರ್ಥರು ( ೧೬೭೧-೧೬೮೮ ) ೬೧
೧೯. ಶ್ರೀ ಗುರು ಯೋಗೀಂದ್ರ ತೀರ್ಥಾರ್ಯ - ಲಕುಮೀಶ

ಶ್ರೀ ಸೂರೀಂದ್ರತೀರ್ಥರು ( ೧೬೮೮-೧೬೯೨ ) ೬೧
೨೦. ಸೂರೀಂದ್ರ ಸೂರೀಂದ್ರ ಸೂರಿ ಜನರಿಂದಾರಾಧಿತ - ಲಕುಮೀಶ

ಶ್ರೀ ಸುಮತೀಂದ್ರತೀರ್ಥರು ( ೧೬೯೨ -೧೭೨೫ ) ೬೪
೨೧. ಶ್ರೀಗುರು ಸುಮತೀಂದ್ರ ಯೋಗಿಗಳಭಿನಮಿಪೆ - ಲಕುಮೀಶ

ಶ್ರೀ ಉಪೇಂದ್ರತೀರ್ಥರು ( ೧೭೨೫-೧೭೨೮ )
೨೨. ಹಿಂಗದೆ ನೀ ಭಜಿಸೊ ಈ ಮೌನಿ ಪದಗಳ - ಲಕುಮೀಶ

### ಶ್ರೀ ವಾದೀಂದ್ರತೀರ್ಥರು ( ೧೭೨೮ -೧೭೫೦ ) ೬೯

೨೩. ಕಂಡೆಕಂಡೆನೊ ಕಂಗಳಲಿ ಭೂಮಂಡಲದೊಳು - ವಿಜಯದಾಸರು

೨೪. ಎಣೆಯಾರೊ ನಿಮಗೆ ಕುಂಭಿಣಿಯ ಮಧ್ಯದಲಿನ್ನು- ಜಗನ್ನಾಥದಾಸರು

೨೫. ವಾದೀಂದ್ರ ಗುರುರಾಜ ನಿನ್ನ ಪಾದವ ತೋರಿಸಯ್ಯ - ಶ್ರೀ ಪ್ರದ್ಯುಮ್ನತೀರ್ಥರು

### ಶ್ರೀ ವಸುಧೇಂದ್ರತೀರ್ಥರು ( ೧೭೫೦ - ೧೭೬೧ ) ೭೯

೨೬. ತರಣಿ ಕುಲೋತ್ಪನ್ನ ತಪುತ ಕಾಂಚನವರ್ಣ - ಗೋಪಾಲವಿಠಲ

೨೭. ವಸುಧೇಂದ್ರರಾಯಾ ಪಾವನಕಾಯಾ - ಜಗನ್ನಾಥದಾಸರು

೨೮. ವಂದನೆ ಮಾಡಿರೈ ಗುರು ವಸುಧೇಂದ್ರರ ಪಾಡಿರೈ - ಅಭಿನವಪ್ರಾಣೇಶವಿಠಲ

### ಶ್ರೀ ವರದೇಂದ್ರತೀರ್ಥರು ( ೧೭೬೧-೧೭೮೫ ) ೮೩

೨೯. ವರದೇಂದ್ರ ಯತಿಚಕ್ರವರ್ತೀ ನಿರಂತರ ವರ್ಣಿಸುವೆ - ಜಗನ್ನಾಥದಾಸರು

೩೦. ಹಿಂದಿನ ಸುಕರ್ಮವೇಸು ಬಂದೊದಗಿದವೊ - ಪ್ರಾಣೇಶವಿಠಲ

೩೧. ವರದೇಂದ್ರಾರ್ಯರ ಪಾದಸರಸಿಜಯುಗ - ಗುರುಜಗನ್ನಾಥ ವಿಠಲ

೩೨. ವಂದಿಸುವೆನು ಭವಮಂದಧಿತಾರಕ - ಅಭಿನವಪ್ರಾಣೇಶವಿಠಲ

೩೩. ವೃಂದಾರಕೇಂದ್ರ ಯತಿ, ವೃಂದಾರಕೇಂದ್ರ ವ್ರತಿ- ಅಭಿನವಪ್ರಾಣೇಶವಿಠಲ

೩೪. ವರದೇಂದ್ರ ಗುರು ನಿಮ್ಮ ಚರಣಸರಸೀರುಹ - ಗುರುಶ್ರೀಶಪ್ರಾಣೇಶ

೩೫. ಶ್ರೀ ವರದೇಂದ್ರಗೆ ನಮೋ ನಮೋ ಕೋವಿದ ವಂದ್ಯಗೆ - ವರದೇಶವಿಠಲ

೩೬. ಯತಿಶಿರೋಮಣಿಯಾದ ವರದೇಂದ್ರ ಗುರುರಾಯ - ಮಾಮೋದವಿಠಲ

೩೭. ವರದೇಂದ್ರತೀರ್ಥರ ಪದಧ್ಯಾನ ಮುಕ್ತಿ ಮಾರ್ಗಕೆ - ಕಾರ್ಪರನರಸಿಂಹ

೩೮. ಜೋ ಜೋ ವಾದೀಂದ್ರ ಕರಕಮಲೋದ್ಭವ - ಸುಂದರವಿಠಲ

೩೯. ವರ್ಣಿಸಲು ಸಾಧ್ಯವೇ ಧರೆಯೊಳಿನ್ನು - ಶ್ಯಾಮಸುಂದರ

### ಶ್ರೀ ಧೀರೇಂದ್ರತೀರ್ಥರು ( ೧೭೮೫ ) ೧೦೨

೪೦. ವರದಾತೀರದಿ ಶೋಭಿಪ ಯತಿವರನ್ಯಾರೇ - ಗುರುಜಗನ್ನಾಥವಿಠಲ

೪೧. ಎಂದು ಕರುಣದಿಂದ ನೋಡುವಿ ಧೀರೇಂದ್ರ ಗುರುವೇ - ಶ್ರೀಕೃಷ್ಣವಿಠಲ

೪೨. ಮರೆಯ ಹೊಕ್ಕೆನೊ ನಿನ್ನ ಮರೆಯಬೇಡವೊ ಎನ್ನ - ಶ್ರೀವೆಂಕಟೇಶ

೪೩. ಲಾಲಿ ಲಾಲಿ ಗುರು ಧೀರೇಂದ್ರವರ್ಯಾ - ಮುದ್ದುಕೃಷ್ಣವಿಠಲ

೪೪. ಧೀರೇಂದ್ರ ಗುರುಗಳ ಚಾರುಚರಣ ಸ್ಮರಿಸಿರೋ - ಧೀರವಿಠಲ

ಶ್ರೀ ಭುವನೇಂದ್ರತೀರ್ಥರು ( ೧೭೮೫-೧೭೯೯ ) ೧೧೦

೪೫. ನಮಿಸುವೆನು ಭುವನೇಂದ್ರ ಗುರುರಾಯಾ - ಜಗನ್ನಾಥದಾಸರು

೪೬. ಭುವನೇಂದ್ರಯತಿರನ್ನ ಭುವನ ಪಾವನ್ನ - ಮೋಹನದಾಸರು

೪೭. ಗುರುಗಳ ನೋಡಿರ್‍ಯೆ ಉತ್ತಮ ವರಗಳ ಬೇಡಿರ್‍ಯೆ - ಪ್ರಾಣೇಶವಿಠಲ

೪೮. ಶ್ರೀಮಧ್ವಮತವೆಂಬ ಕ್ಷೀರಪಾರಾವಾರ - ಪ್ರಾಣೇಶವಿಠಲ

ಶ್ರೀ ಸುಬೋಧೇಂದ್ರತೀರ್ಥರು ( ೧೭೯೯-೧೮೦೭ ) ೧೧೬

೪೯. ಪಾಹಿ ಪಾಹಿ ಜಿತಮಾರ ಪಾಹಿ ಸುಬೋಧೇಂದ್ರ - ಪ್ರಾಣೇಶವಿಠಲ

೫೦. ಗರಳಾಪುರದಿ ಮೆರೆವ ಗುರು ಸುಬೋಧೇಂದ್ರರ ಚರಣ - ಲಕುಮೀಶ

ಶ್ರೀ ಸುಜನೇಂದ್ರತೀರ್ಥರು ( ೧೮೦೭-೧೮೩೬ ) ೧೧೬

೫೧. ನಮಿಸಿ ಬೇಡುವೆ ಗುರುವೆ ಶ್ರೀಸುಜನೇಂದ್ರರ - ಲಕುಮೀಶ

ಶ್ರೀ ಸುಜ್ಞಾನೇಂದ್ರತೀರ್ಥರು ( ೧೮೩೬-೧೮೬೧ ) ೧೨೧

೫೨. ಸುಜ್ಞಾನೇಂದ್ರಾರ್ಯ ಗುರುಶ್ರೀ - ಲಕುಮೀಶ

ಶ್ರೀ ಸುಧರ್ಮೇಂದ್ರತೀರ್ಥರು ( ೧೮೬೧-೧೮೭೨ ) ೧೨೧

೫೩. ವಂದಿಸುವೆ ಶ್ರೀ ಮಂತ್ರಮಂದಿರದಿ ರಾಜಿಪರ - ಲಕುಮೀಶ

ಶ್ರೀ ಸುಗುಣೇಂದ್ರತೀರ್ಥರು ( ೧೮೭೨-೧೮೮೪ ) ೧೨೨

೫೪. ಶ್ರೀಗುರು ಸುಗುಣೇಂದ್ರತೀರಥರ ಪದಕಮಲ - ಲಕುಮೀಶ

ಶ್ರೀ ಸುಪ್ರಜ್ಞೇಂದ್ರತೀರ್ಥರು ( ೧೮೮೪-೧೯೦೩ ) ೧೨೨

೫೫. ದಯದಿ ಪಿಡಿಯೊ ಕೈಯ್ಯ ಸುಪ್ರಜ್ಞೇಂದ್ರರಾಯ - ಲಕುಮೀಶ

ಶ್ರೀ ಸುಕೃತೀಂದ್ರತೀರ್ಥರು ( ೧೯೦೩-೧೯೧೨ ) ೧೨೬

೫೬. ಸುಕೃತೀಂದ್ರ ಯತಿವರರ ಭಕುತಿಯಿಂದಲಿ ಭಜಿಸೊ - ಲಕುಮೀಶ

ಶ್ರೀ ಸುಶೀಲೇಂದ್ರತೀರ್ಥರು ( ೧೯೧೨-೧೯೨೬ ) ೧೨೮

೫೭. ಇಂದು ನೋಡಿದೆ ಸುಶೀಲೇಂದ್ರ ಗುರುಗಳ -ವರದೇಶವಿಠಲ

೫೮. ಸುಶೀಲೇಂದ್ರ ಸುಶೀಲೇಂದ್ರ ಪ್ರತಿಯು ನಾವಿ ಕರಿವಂದ ಮೃಗೇಂದ್ರ - ಲಕುಮೀಶ
೫೯. ಯತಿದ್ವಯರನೆ ಸ್ಮರಿಸೊ ಪ್ರತಿದಿನ - ಧೀರವಿಠಲ
೬೦. ವರದಾ ತೀರದಿ ನೆಲಸಿಹ ಗುರುವರನ್ಯಾರೆ - ಶ್ಯಾಮಸುಂದರ
೬೧. ವಶವಲ್ಲ ವರ್ಣಿಸಲು ಸುಶೀಲೇಂದ್ರ ತೀರ್ಥರ - ಶ್ಯಾಮಸುಂದರ

ಶ್ರೀ ಸುವ್ರತೀಂದ್ರತೀರ್ಥರು ( ೧೯೨೬-೧೯೩೩ ) ೧೩೫
೬೨. ನಮಿಸುವೆನು ಸುವ್ರತೀಂದ್ರಯತಿಗಳಿಗೆ ಸತತ - ಲಕುಮೀಶ

ಶ್ರೀ ಸುಯಮೀಂದ್ರತೀರ್ಥರು ( ೧೯೩೩-೧೯೬೭ ) ೧೩೮
೬೩. ಶ್ರೀ ಸುಯಮೀಂದ್ರರ ಚರಣಕಮಲ ಭಜಿಸೋ - ಅಭಿನವಪ್ರಾಣೇಶವಿಠಲ

ಶ್ರೀ ಸುಜಯೀಂದ್ರತೀರ್ಥರು ( ೧೯೬೭-೧೯೮೬ ) ೧೪೪
೬೪. ಉಡುರಾಜಮುಖಿಯೆ ಕೇಳ್ - ಸುಂದರವಿಠಲ

ಶ್ರೀ ಸುಶಮೀಂದ್ರತೀರ್ಥರು ( ೧೯೮೬ — ೧೪೮
೬೫. ದಶದಿಶದೊಳು ಯಶ ಪಸರಿಸಿ ರಾಜಿಪ - ಲಕುಮೀಶ
೬೬. ರಜತ ತುಲಾಭಾರ ವಿಜಯೋತ್ಸವ - ಧೀರವಿಠಲ

ಅನುಬಂಧಗಳು

(ಅ) ಮಂತ್ರಾಲಯ ಯತಿವರ್ಯರೇ ರಚಿಸಿದ ಕೀರ್ತನೆಗಳು ೧೫೨
(ಆ) ಮಂತ್ರಾಲಯ ಯತಿಗಳ ಸ್ತುತಿಪರವಾದ ಇನ್ನಷ್ಟು ಹಾಡುಗಳ ಅನುಕ್ರಮಣಿಕೆ ೧೨೨
(ಇ) ಶ್ರೀ ವಿಜಯೀಂದ್ರತೀರ್ಥರ ವಾಗ್ವೈಖರಿಯ ನಿದರ್ಶನಗಳು ೧೬೪
(ಈ) ಹಾಡುಗಳ ಅಕಾರಾದಿ ಸೂಚಿ ೧೬೮

■ ■ ■

# ಶ್ರೀ ಮಂತ್ರಾಲಯ ಮಠದ ಯತಿ ಪೀಳಿಗೆ

ಶ್ರೀ ಮಧ್ವಾಚಾರ್ಯರು

↓

☆ ಶ್ರೀ ಪದ್ಮನಾಭತೀರ್ಥರು ☆ ಶ್ರೀ ನರಹರಿತೀರ್ಥರು ☆ ಶ್ರೀ ಮಾಧವತೀರ್ಥರು ☆ ಶ್ರೀ ಅಕ್ಷೋಭ್ಯತೀರ್ಥರು

☆ ಶ್ರೀ ಜಯತೀರ್ಥರು ☆ ಶ್ರೀ ವಿದ್ಯಾಧಿರಾಜರು ☆ ಶ್ರೀ ಕವೀಂದ್ರತೀರ್ಥರು ☆ ಶ್ರೀ ವಾಗೀಶತೀರ್ಥರು ☆ ಶ್ರೀ ರಾಮಚಂದ್ರತೀರ್ಥರು

೧. ಶ್ರೀ ವಿಬುಧೇಂದ್ರರು (೧೪೩೫-೯೦)
೨. ಶ್ರೀ ಜಿತಾಮಿತ್ರರು (೧೪೯೦-೯೨)
೩. ಶ್ರೀ ರಘುನಂದನರು (೧೪೯೨-೧೫೦೪)
೪. ಶ್ರೀ ಸುರೇಂದ್ರರು (೧೫೦೪-೭೫)
೫. ಶ್ರೀ ವಿಜಯೀಂದ್ರರು (೧೫೭೫-೧೬೧೪)
೬. ಶ್ರೀ ಸುಧೀಂದ್ರರು (೧೬೧೪-೧೬೨೩)

↓

[ಗುರುರಾಜಾಚಾರ್ಯ] ← ಅಣ್ಣ ← ೭. **ಶ್ರೀ ರಾಘವೇಂದ್ರರು** (೧೬೨೩-೧೬೭೧)

[ಗುರುರಾಜಾಚಾರ್ಯ] ↓ [ವೆಂಕಟನಾರಾಯಣಾಚಾರ್ಯ] ↓

೮. ಶ್ರೀ **ಯೋಗೀಂದ್ರರು** (೧೬೭೧-೮೮)
೯. ಶ್ರೀ **ಸೂರೀಂದ್ರರು** (೧೬೮೮-೯೨)
೧೦. ಶ್ರೀ **ಸುಮತೀಂದ್ರರು** (೧೬೯೨-೧೭೨೫)
೧೧. ಶ್ರೀ **ಉಪೇಂದ್ರರು** (೧೭೨೫-೨೮)

ಶ್ರೀ ರಾಘವೇಂದ್ರರು ↓ [ಲಕ್ಷ್ಮೀನಾರಾಯಣಾಚಾರ್ಯ] ↓ [ಪುರುಷೋತ್ತಮಾಚಾರ್ಯ] ↓

೧೨. ಶ್ರೀ **ವಾದೀಂದ್ರರು** (೧೭೨೮-೫೦)
↓
೧೫. ಶ್ರೀ **ಧೀರೇಂದ್ರರು** (೧೭೮೫)

[ವೇಣುಗೋಪಾಲಾಚಾರ್ಯ]
↓
೧೩. ಶ್ರೀ **ವಸುಧೇಂದ್ರರು** (೧೭೫೦-೬೧)
೧೪. ಶ್ರೀ **ವರದೇಂದ್ರರು** (೧೭೬೧-೮೫)
೧೬. ಶ್ರೀ **ಭುವನೇಂದ್ರರು** (೧೭೮೫-೯೯)
೧೭. ಶ್ರೀ **ಸುಬೋಧೇಂದ್ರರು** (೧೭೯೯-೧೮೦೭)

(ಮಗಳು) (ಮಗ)

೧೮. ಶ್ರೀ ಸುಜನೇಂದ್ರರು (೧೮೦೭-೩೬) ೧೯. ಶ್ರೀ ಸುಜ್ಞಾನೇಂದ್ರರು (೧೮೩೬-೬೧)

೨೦. ಶ್ರೀ ಸುಧರ್ಮೇಂದ್ರರು (೧೮೬೧-೭೨)

[ರಾಜಗೋಪಾಲಾಚಾರ್ಯ] ೨೧. ಶ್ರೀ ಸುಗುಣೇಂದ್ರರು (೧೮೭೨-೮೪)

[ವೆಂಕಟರಾಘವೇಂದ್ರಾಚಾರ್ಯ] ೨೨. ಶ್ರೀ ಸುಪ್ರಜ್ಞೇಂದ್ರರು (೧೮೮೪-೧೯೦೩)

೨೩. ಶ್ರೀ ಸುಕೃತೀಂದ್ರರು (೧೯೦೩-೧೨) ೨೪. ಶ್ರೀ ಸುಶೀಲೇಂದ್ರರು (೧೯೧೨-೨೬) [ಸುಜ್ಞಾನೇಂದ್ರಾಚಾರ್ಯ] [ವೃಂದಾವನಮ್ಮ = ಹುಲಿ ಹನುಮಂತಾಚಾರ್ಯ]

೨೬. ಶ್ರೀ ಸುಯಮೀಂದ್ರರು (೧೯೩೩-೬೭) ೨೫. ಶ್ರೀ ಸುವ್ರತೀಂದ್ರರು (೧೯೨೬-೩೩)

[ರಾಜಗೋಪಾಲಾಚಾರ್ಯ] ೨೭. ಶ್ರೀ ಸುಜಯೀಂದ್ರರು (೧೯೬೭-೮೬)

೨೮. ಶ್ರೀ ಸುಶಮೀಂದ್ರರು (೧೯೮೬ - )

೨೯. ಶ್ರೀ ಸುವಿದ್ಯೇಂದ್ರರು (ಕಿರಿಯರು)

* ಕೆಳಬಾಣದ ↓ ಗುರುತು ನೇರ ಸಂತಾನದ್ದು.
[ ] ಆವರಣದಲ್ಲಿಯ ಹೆಸರು ಸಂಬಂಧಿಕರದ್ದು.

## ಇಲ್ಲಿ ಸೇರ್ಪಡೆಯಾಗಿರುವ ಹರಿದಾಸರುಗಳು

ಅಭಿನವಪ್ರಾಣೇಶವಿಠಲ
ಕಮಲೇಶ
( ರಾಜಾ ಎಸ್. ಗುರುರಾಜಾಚಾರ್ಯರು )
ಕಾರ್ಪರ ನರಸಿಂಹ
ಗುರುಜಗನ್ನಾಥವಿಠಲ
ಗುರುಪುರಂದರವಿಠಲ
ಗುರುಮಧ್ವಪತಿ ವಿಠಲ
ಗುರುಶ್ರೀಶವಿಠಲ
ಗೋಪಾಲದಾಸರು
ಜಗನ್ನಾಥದಾಸರು
ಧೀರವಿಠಲ (ಕಂಪ್ಲಿ ಧೀರಣ್ಣ)
ಪ್ರಾಣೇಶವಿಠಲ
ಪ್ರಸನ್ನವೆಂಕಟ
ಪ್ರಸನ್ನಶ್ರೀನಿವಾಸ
ಮಾಮೋದವಿಠಲ
ಮುದ್ದುಕೃಷ್ಣವಿಠಲ
ಮೋಹನದಾಸರು
ಲಕುಮೀಶ ( ಕುರುಡಿ ಅನಂತಾಚಾರ್ಯ )
ವರದೇಶವಿಠಲ
ವಿಜಯನರಸಿಂಹ
ವಿಜಯದಾಸರು
ಶ್ಯಾಮಸುಂದರ
ಶ್ರೀಕೃಷ್ಣವಿಠಲ
ಶ್ರೀವೆಂಕಟೇಶ
ಸುಂದರವಿಠಲ

ಯತಿವರ್ಯ / ಹರಿದಾಸರು
ಶ್ರೀ ಶ್ರೀಪಾದರಾಜರು
ಶ್ರೀ ವಿದ್ಯಾರತ್ನಾಕರರು
ಶ್ರೀ ವಿದ್ಯಾಪ್ರಸನ್ನರು
ಶ್ರೀ ವಿಶ್ವೇಂದ್ರತೀರ್ಥರು
ಶ್ರೀ ಪ್ರದ್ಯುಮ್ನತೀರ್ಥರು



ಶ್ರೀ ವಿಜಯೀಂದ್ರತೀರ್ಥರ ಮೂಲ ಬೃಂದಾವನ, ಕುಂಭಕೋಣ

# ಹರಿದಾಸರುಗಳ ಕಿರು ಪರಿಚಯ

## ಆದ್ಯ ಯತಿಗಳನ್ನು ಕುರಿತ ಹಾಡುಗಳು

ಶ್ರೀಮಧ್ವಾಚಾರ್ಯರ ಪ್ರಥಮ ಶಿಷ್ಯ ಶ್ರೀ ಪದ್ಮನಾಭತೀರ್ಥರಿಂದ ಮುಂದುವರಿದ ಯತಿ ಪರಂಪರೆಯಲ್ಲಿ ಸರ್ವಮಾನ್ಯ ಶ್ರೀ ನರಹರಿತೀರ್ಥರು, ಶ್ರೀ ಮಾಧವತೀರ್ಥರು, ಶ್ರೀ ಅಕ್ಷೋಭ್ಯತೀರ್ಥರು, ಶ್ರೀ ಜಯತೀರ್ಥರು, ಶ್ರೀ ವಿದ್ಯಾಧಿರಾಜರು, ಶ್ರೀ ಕವೀಂದ್ರರು, ಶ್ರೀ ವಾಗೀಶತೀರ್ಥರು ಮತ್ತು ಶ್ರೀ ರಾಮಚಂದ್ರತೀರ್ಥರು ಆದ್ಯ ಯತಿವರ್ಯರೆನಿಸಿದ್ದಾರೆ.

ಇವರುಗಳಲ್ಲಿ ಮೊದಲಿನ ನಾಲ್ವರ ಬಗ್ಗೆ ಒಂದೆರಡು ಕೀರ್ತನೆಗಳು ಲಭ್ಯ. ಶ್ರೀ ಜಯತೀರ್ಥರೊಬ್ಬರ ಮೇಲಿನವು ಮಾತ್ರ ಸಾಕಷ್ಟು ಇವೆ. ಆಮೇಲಿನವರ ಬಗೆಗಿನ ಒಂದು ಕೃತಿಯೂ ದೊರೆತಿಲ್ಲ. ಅನಂತರ ಬಂದ ವಿಬುಧೇಂದ್ರರ ಕಾಲದಿಂದ ಮುಂದಿನವರು ಪ್ರತಿಯೊಬ್ಬರ ಬಗ್ಗೆಯೂ ಕೀರ್ತನೆಗಳು ನೋಡಸಿಗುತ್ತವೆ.

ಈ ಆದ್ಯ ಯತಿಗಳ ಮೇಲಿನ ಕೃತಿಗಳು ಪೂರ್ಣವಾಗಿ, ಇಲ್ಲವೆ ಸಾಕಷ್ಟು ಸಂಖ್ಯೆಯಲ್ಲಿ ದೊರೆತ ಮೇಲೆ ಅವನ್ನು ಪ್ರಸ್ತುತ ಸಂಕಲನಕ್ಕೆ ಸೇರಿಸಿ ಮರುಮುದ್ರಣ ಮಾಡಲಾಗುವುದು.

ಪ್ರಕೃತ ಈಗ ಸೇರ್ಪಡೆಯಾಗಿರುವ ಕೃತಿಗಳ ಹರಿದಾಸರನ್ನು ಪರಿಚಯಿಸಿಕೊಳ್ಳೋಣ.

ಕೀರ್ತನೆಗಳ ಅನ್ವೇಷಣೆಯಲ್ಲಿ ನಮಗೆ ದೊರೆತದ್ದು ೧೩೩ ಹಾಡುಗಳು. ಈ ಸಂಖ್ಯೆ ಗಣನೀಯವಾದದ್ದೇ. ಆದರೆ ಹಾಡುಗಳ ವಿಷಯದ ನಿರೂಪಣೆಯಲ್ಲಿ ಪುನರಾವೃತ್ತಿ ಇದ್ದುದರಿಂದ ಅವುಗಳಲ್ಲಿ ಸುಮಾರು ಅರ್ಧದಷ್ಟನ್ನು ಬಿಡಲಾಗಿದೆ. ಆದಾಗ್ಯೂ ಅವುಗಳ ಪಟ್ಟಿಯನ್ನು ಅನುಬಂಧದಲ್ಲಿ ಕೊಟ್ಟಿದ್ದು, ಬೇಕಿದ್ದವರು ಅವಶ್ಯ ಗಮನಿಸಬಹುದು.

ಆಶ್ಚರ್ಯದ ಸಂಗತಿಯೆಂದರೆ ಶ್ರೀ ವಿಭುದೇಂದ್ರರಿಂದ ಇದುವರೆಗಿನ ೨೮ ಜನ ಯತಿಗಳಲ್ಲಿ ಪ್ರತಿಯೊಬ್ಬರ ಬಗ್ಗೆ ಒಂದಾದರೂ ಕೀರ್ತನೆ ಇರುವುದು. ಕೆಲವು ಯತಿಗಳ ಕುರಿತು ಹೆಚ್ಚು ಹಾಡುಗಳಿವೆ. ಶ್ರೀ ವರದೇಂದ್ರ ಮೇಲಿನ ಹಾಡುಗಳಂತೂ ೩೫ನ್ನು ಮಿಕ್ಕಿವೆ! ಇದರ ಮೇಲಿಂದ ಯಾರೊಬ್ಬ ಯತಿಗಳ ಮಟ್ಟ, ಇಲ್ಲವೆ ಶ್ರೇಷ್ಠತ್ವವನ್ನು ಸರ್ವಥಾ ಗುರುತಿಸಹೋಗಬಾರದು.

ಇನ್ನು ಶ್ರೀ ರಾಘವೇಂದ್ರ ಗುರುಸಾರ್ವಭೌಮರನ್ನು ಕುರಿತ ಹಾಡುಗಳು ಲೆಕ್ಕವೇ ಇಲ್ಲ ಎನ್ನುವಷ್ಟಿವೆ. ಇನ್ನೂ ರಚಿತವಾಗುತ್ತಲೇ ಇವೆ. ಅವರ ಸ್ತುತಿಪರ ಗೀತಗಳ ಸಂಕಲನಗಳೇ ಪ್ರಕಟವಾಗಿರುವುದರಿಂದ, ಅವನ್ನೆಲ್ಲ ಇಲ್ಲಿ ಅಳವಡಿಸಹೋಗಿಲ್ಲ. ಹಾಗೆಂದು ಕೈಬಿಡುವುದುಂಟೆ? ಯತಿಗಳೇ ಆಗಿದ್ದ ನಾಲ್ವರು ಹರಿದಾಸರು

ಗುರುಸಾರ್ವಭೌಮರನ್ನು ಕುರಿತು ರಚಿಸಿದವುಗಳನ್ನು ಮಾತ್ರ ಇಲ್ಲಿ ಸೇರಿಸಲಾಗಿದೆ. ಈ ಹಾಡುಗಳು ಅಪರಿಚಿತವಾದವುಗಳೇ.

ಒಟ್ಟಿಗೆ ೨೯ ಜನ ಹರಿದಾಸರುಗಳ ಹಾಡುಗಳು ಇಲ್ಲಿ ಸಮಾವೇಶಗೊಂಡಿವೆ. ದಾಸಸಾಹಿತ್ಯದ ಆದ್ಯ ಪ್ರವರ್ತಕರು **ಶ್ರೀಪಾದರಾಯರು** ( ೧೪೧೩ - ೧೫೦೪ ), ತಾನೇ. ಅವರು ರಚಿಸಿದ ಕೀರ್ತನೆಯು ಇಲ್ಲಿಯೂ ಮುರುಪಿಗೇ ಇರುವುದು ಶುಭಚಿಹ್ನೆ. ಮಂತ್ರಾಲಯದ ಯತಿಪರಂಪರೆಯಲ್ಲಿ ಎರಡನೆಯವರಾದ ಜಿತಾಮಿತ್ರರನ್ನು ಕುರಿತು ಶ್ರೀಪಾದರಾಜರೇ ರಚಿಸಿರುವ ಆ ಹಾಡು ಮನನೀಯವಾಗಿದೆ. ಶ್ರೀಪಾದರಾಜರ ಎಲ್ಲ ಕೀರ್ತನೆಗಳನ್ನು ಮೈಸೂರು ವಿಶ್ವವಿದ್ಯಾನಿಲಯದ ವತಿಯಿಂದ ಡಾ. ಜಿ. ವರದರಾಜರಾವ್ ಅವರು ಪ್ರಕಟಿಸಿದ್ದಾರಷ್ಟೆ ( ೧೯೮೭ ). ಈ ವಿಚಾರದಲ್ಲಿ ಅವರು ನಿಷ್ಣಾತರೆಂದು ಹೆಸರು ಪಡೆದಿದ್ದಾರೆ. ಆದರೆ ಈ 'ಜಿತಾಮಿತ್ರ' ಎಂದರೆ ಯಾರು? ಅದಾವ ಯತಿಗಳನ್ನು ಶ್ರೀಪಾದರಾಜರು ಸ್ತುತಿಸಿದ್ದಾರೆ? ಎಂಬುದೇ ಸಮಸ್ಯೆಯಾಗಿತ್ತಂತೆ!

ಕಾಲಮಾನದಿಂದ ಅನಂತರ ಬರಬೇಕಾದವರು **ಗುರುಪುರಂದರವಿಠಲರು** ಮತ್ತು **ಗುರುಮಧ್ವಪತಿವಿಠಲರು**. ಈರ್ವರೂ ಪುರಂದರದಾಸರ ಸಂತತಿಯವರು ಎಂಬ ಪ್ರತೀತಿ ಇದೆ. ೧೬ನೆಯ ನೆಯ ಶತಮಾನದ ಕೊನೆಯಲ್ಲಿದ್ದ ಇವರಿಬ್ಬರು ತಮ್ಮ ಕಾಲದ ಶ್ರೀ ವಿಜಯೀಂದ್ರರನ್ನು ಕಣ್ಣಾರೆ ಕಂಡವರು. ಹಾಗಾಗಿ ಭಾವಪರವಶತೆಯಿಂದ ಅವರನ್ನು ಬಣ್ಣಿಸಿದ್ದಾರೆ. ಕೆಲ ವರ್ಷಗಳ ಅನಂತರ ಬಾಳಿದ **ಪ್ರಸನ್ನವೆಂಕಟದಾಸರೂ** ವಿಜಯೀಂದ್ರರನ್ನು ನೆನೆದಿದ್ದಾರೆ. ಗುರುಮಧ್ವ ಪತಿಯವರು ಅವರನ್ನು ಗಜೇಂದ್ರನಿಗೆ ಹೋಲಿಸಿದ್ದಾದರೆ, **ಪ್ರಸನ್ನವೆಂಕಟದಾಸರು** ಸೂರ್ಯನಿಗೆ ಅನ್ವಯಿಸಿದ್ದಾರೆ. ಈ ಗಜೇಂದ್ರ 'ರಮೇಶನ ಧ್ಯಾನವೆಂಬ ಮದವೇರಿ ಕುಮತಿ ಕದಳಿಯನ್ನು ಕಿತ್ತೀಡ್ಯಾಡಿ... ಗುರು ಸುರೇಂದ್ರತೀರ್ಥರೆಂಬೊ ಮಾವಟಿಗನಾಜ್ಞೆಯಲ್ಲಿದ್ದುದಂತೆ.' ಪ್ರಸನ್ನವೆಂಕಟದಾಸರು ಸೂರ್ಯನ ಹೋಲಿಕೆ ತಂದಿರುವಲ್ಲಿ ಇಂಥದೇ ಅನ್ವರ್ಥಕತೆ ಇದೆ. ವಿಜಯೀಂದ್ರರು ತಮ್ಮ ಗುರುಗಳಾದ ವ್ಯಾಸರಾಯರನ್ನು ಮೇಘಕ್ಕೆ ಹೋಲಿಸಿ ವರ್ಣಿಸಿದುದು ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ. ( ಅನುಬಂಧ ೧ )

ಇನ್ನೀಗ ವಿಜಯದಾಸರ ಪೀಳಿಗೆಗೆ ಬರೋಣ. ಸ್ವಯಂ **ವಿಜಯದಾಸರು** ಹೊಗಳಿದ್ದುದು ಶ್ರೀ ವಾದೀಂದ್ರರನ್ನು. **ಗೋಪಾಲದಾಸರೂ** ಹಾಗೆಯೇ ಮಾಡಿದ್ದಾರೆ. ಇತ್ತ **ಜಗನ್ನಾಥದಾಸರು** ಒಬ್ಬರನ್ನಲ್ಲ - ನಾಲ್ವರು ಮಂತ್ರಾಲಯದ ಯತಿಗಳನ್ನು ಕಂಡವರು. ರಾಘವೇಂದ್ರ ಗುರುಸಾರ್ವಭೌಮರಂತೂ ಸರಿಯೇ; ವಸುಧೇಂದ್ರ, ವರದೇಂದ್ರ, ಭುವನೇಂದ್ರರು - ಈ ಪ್ರತಿಯೊಬ್ಬರ ಬಗ್ಗೆ ಇರುವ ಅವರ ಸ್ತುತಿಪರ ಪದ್ಯಗಳು ಭಕ್ತಿಭಾವದ ಜೊತೆಗೆ ಪ್ರೌಢಿಮೆಯಿಂದ ಕೂಡಿವೆ. ಶ್ರೀ ವರದೇಂದ್ರರನ್ನು

ಸ್ತುತಿಸುವಾಗ ಬಳಸಿದ ದಾಸಪ್ರತತಿ, ಮೃದು ಮಧುರ ವಚನ, ಸರಸಕವೀಂದ್ರ ಮುಂತಾದ ವಿಶೇಷಣ ಗುಂಫನಗಳನ್ನು ಗಮನಿಸತಕ್ಕುದು. ಇದರಿಂದಾಗಿ ಆ ಯತಿಚತುಷ್ಟಯರ ಸ್ವರೂಪದರ್ಶನವು ನಮಗೆ ಸ್ಪಷ್ಟವಾಗಿ ವೇದ್ಯವಾಗುತ್ತದೆ.

ಶ್ರೀ ವರದೇಂದ್ರರು ತಂತ್ರಸಾರವನ್ನು ಕನ್ನಡದಲ್ಲಿ ರಚಿಸಿದ್ದಾರೆ. ಅದರಲ್ಲಿ ಜಗನ್ನಾಥದಾಸರ ಅಪೇಕ್ಷೆಯ ಮೇರೆಗೆ ಹಾಗೆ ಮಾಡಿದ್ದಾರೆಂಬುದನ್ನು ಕಾಣಿಸಿದ್ದಾರೆ. ದಾಸರನ್ನು ವಿಶೇಷಿಸುವಾಗ "ಬ್ಯಾಗವಾಟದ ರಂಗನೊಲಿದ ಶ್ರೀ ನರಸಿಂಹ ಭಾಗವತರಣುಗ" ನೆಂದು ಉಲ್ಲೇಖಿಸಿದ್ದಾರೆ. ಜಗನ್ನಾಥದಾಸರ ಕೀರ್ತಿ ಹರಡುವುದಕ್ಕೆ ಮುನ್ನ ಅವರ ತಂದೆಯೂ ಸೂಕ್ತ ಗೌರವಕ್ಕೆ ಪಾತ್ರರಾಗಿದ್ದರೆಂದು ಇದರಿಂದ ಊಹಿಸಬಹುದು.

**ಮೋಹನದಾಸರು** ಶ್ರೀ ಭುವನೇಂದ್ರರನ್ನು ಕುರಿತು ಹಾಡಿ ಹೊಗಳಿದ್ದಾರೆ. ಅದರಲ್ಲಿಯೂ ಇಂಥ ವಿಶೇಷಣ ವಿಶಿಷ್ಟತೆ ಕಂಡುಬರುತ್ತದೆ. ಈ ಭುವನೇಂದ್ರರು 'ತಂತ್ರಸಾರಾಂತ ಆದ್ಯಂತಗಳ ಅರ್ಥವ ಪೇಳಿ ಮಂತ್ರೋಪದೇಶ ಮಾಡಿದವರು' ಎಂದಿದ್ದಾರೆ.

## ಪ್ರಾಣೇಶದಾಸರು

**ಪ್ರಾಣೇಶದಾಸರು** ( ಯೋಗೀಂದ್ರ ) ವಿಜಯದಾಸರ ಪೀಳಿಗೆಯವರೇ. ೧೮ನೆಯ ಶತಮಾನದ ಉತ್ತರಾರ್ಧದಲ್ಲಿ ಬಾಳಿದವರು. ಲಿಂಗಸುಗೂರಿನ ಶಾನಭೋಗ ಮನೆತನ. ಆಸ್ತಿ-ಪಾಸ್ತಿ ಬೇಕಾದಷ್ಟು ಇದ್ದಿತು. ಯೋಗೀಂದ್ರರಾಯರದು ಸುಖೀ ಸಂಸಾರ. ಹದಿವಯದಲ್ಲಿ ಬಿಳಿ ಚರ್ಮರೋಗ ಕಾಣಿಸಿಕೊಂಡಿತ್ತಂತೆ. ಮಂತ್ರಾಲಯಕ್ಕೆ ಹೋಗಿ ರಾಯರಲ್ಲಿ ಅನನ್ಯ ರೀತಿಯಿಂದ ಸೇವೆ ಮಾಡಿದರು. ಆ ರೋಗ ಹೋಯಿತು. ಅಂದಿನಿಂದ ಇರಬೇಕು; ಅವರಿಗೆ ಭಗವದ್ಭಕ್ತಿಯ ಕಡೆಗೆ ಒಲವು. ಆಗಾಗ ಕೀರ್ತನೆಗಳನ್ನು ಗುಣುಗುಣಿಸುತ್ತಿದ್ದಿರಬೇಕು. ಅವರ ಅಣ್ಣನೇ ಅವರ ಪ್ರಥಮ ಗುರು. ಆತ ಸಂಸ್ಕೃತ ಶಾಸ್ತ್ರಾಭ್ಯಾಸಕ್ಕಾಗಿ ಹರಪನಹಳ್ಳಿ ವರದಾಚಾರ್ಯರ ಎಂಬಲ್ಲಿ ಕಳಿಸಿದರು. ಕನ್ನಡ ಹಾಡುಗಳನ್ನು ರಚಿಸಿದಾಗ ಈ ಅಣ್ಣನೇ ಬರೆದಿಟ್ಟಿದ್ದರಂತೆ. ಅಂಥದೊಂದು ದಿನ ಜಗನ್ನಾಥದಾಸರ ಆಗಮನ. ಯೋಗೀಂದ್ರರ ಈ ಪ್ರವೃತ್ತಿಯನ್ನು ಕಂಡು, ದಾಸದೀಕ್ಷೆಯನ್ನಿತ್ತು 'ಪ್ರಾಣೇಶವಿಠಲ' ಎಂಬ ಅಂಕಿತವನ್ನು ದಯಪಾಲಿಸಿದರು.

ಅದು ಶ್ರೀ ವರದೇಂದ್ರರ ವೈಭವದ ಕಾಲ. ಪ್ರಾಣೇಶದಾಸರು ಅವರನ್ನು ಲಿಂಗಸುಗೂರಿಗೆ ಆಮಂತ್ರಿಸಿದರು. ದಾಸರ ಸಂಭ್ರಮ ಹೇಳತೀರದು. ಗುರುಗಳ ಆಗಮನಕ್ಕೆ ಇಡೀ ಊರನ್ನೇ ಸಜ್ಜುಗೊಳಿಸಿದರು. ಶ್ರೀಗಳವರು ಪರಿವಾರ ಸಹಿತ, ವೇದಘೋಷ ಮಾಡುತ್ತಿದ್ದವರ ಮಧ್ಯೆ ಕಂಗೊಳಿಸಿದರು. ಅವರ ಆಗಮನದ ಬಗೆಯನ್ನು ಪ್ರಾಣೇಶದಾಸರು 'ಹಿಂದಿನ ಕರ್ಮವೇನು ಬಂದೊದಗಿದವೊ' ಎಂಬ ಹಾಡಿನಲ್ಲಿ ಬಣ್ಣಿಸಿದ್ದಾರೆ( ನಂ. ೩೦ ) ಪೂಜಾದಿ ವಿಧಿಗಳು ಮುಗಿದ ಮೇಲೆ ಶಾನುಭೋಗರ ಹಿತ್ತಿಲಲ್ಲಿದ್ದ ಬಣವೆಯನ್ನು

( ಸ್ಥಳವನ್ನು ) ದಾನವಾಗಿ ಕೇಳಿದರು! ಪ್ರಾಣೇಶದಾಸರಿಗೆ ಆಶ್ಚರ್ಯ. ಆದರೂ ಗುರುಗಳ ಕೇಳಿಕೆ. "ಅವಶ್ಯ ಆಗಲಿ. ಕೊಡ್ತೇನೆ" ಎಂದರು.

ಶ್ರೀ ವರದೇಂದ್ರರಲ್ಲಿಯ ಅವರ ಗುರುಭಕ್ತಿ ಅತ್ಯಂತ ಘನಿಷ್ಠವಾಗಿದ್ದದ್ದು ಮುಂದೂ ಕಾಣಿಸಿಕೊಂಡಿತು. ಅನೇಕ ಬಾರಿ ಅವರಿದ್ದಲ್ಲಿ ಹೋಗಿ ದರ್ಶನ ಭಾಗ್ಯ ಪಡೆಯುತ್ತಿದ್ದರು. ಹಾಗೆ ಕಂಡಾಗೊಮ್ಮೆ ಹಾಡೊಂದು ಹೊರಹೊಮ್ಮುತ್ತಿತ್ತು. ಒಂದೆರಡರಲ್ಲ, ೧೨ ಹಾಡುಗಳು ಈ ರೀತಿಯಲ್ಲಿ ರಚಿತವಾಗಿವೆ. ( ಅನುಬಂಧ ೨ ನೋಡುವುದು ). ಅಂತೂ ಬಗೆಬಗೆಯಿಂದ ಸ್ತುತಿಸಿದ್ದಾರೆ.

ಶ್ರೀ ವರದೇಂದ್ರರು ಪುಣೆಯಲ್ಲಿ ವೃಂದಾವನಸ್ಥರಾದ ಮೇಲೆ ಆ ಬಣವೆಯ ಜಾಗದಲ್ಲಿ ತಾವು ಸನ್ನಿಹಿತರಾಗಿದ್ದೇವೆ ಎಂದು ಸ್ವಪ್ನವಾಯಿತಂತೆ. ತೆಗೆಸಿ ನೋಡಿದಾಗ ಅಲ್ಲೊಂದು ನಳನಳಿಸುವ ತುಳಸೀ ವೃಕ್ಷ! ಅದಕ್ಕೇ ವೃಂದಾವನ ಮಾಡಿಸಿದರು. ಅನಂತರ ಪೀಠವೇರಿದ ಭುವನೇಂದ್ರರಿಗೆ ಈ ವಿಷಯ ತಿಳಿಸಿದಾಗ, ಅವರು ಜುಮಲಾಪುರವೆಂಬ ಊರಿನಲ್ಲಿದ್ದರು. ಅಲ್ಲಿಂದಲೇ ನರಸಿಂಹಾಂಕಿತ ಸಾಲಿಗ್ರಾಮವೊಂದನ್ನು ಕಳಿಸಿಕೊಟ್ಟರಂತೆ. ( ಈ ವಿಷಯ ದಾಸರ ಒಂದು ಹಾಡಿನಲ್ಲಿದೆ. ಅವರ ಚರಿತ್ರ ಗ್ರಂಥಗಳಲ್ಲಿ ಬಂದಂತಿಲ್ಲ.)

ಆ ಮುಂದೆ ಪ್ರಾಣೇಶದಾಸರ ದಾಸಪರಂಪರೆ ಬೆಳೆಯುತ್ತ ಹೋಯಿತು. ಸಣ್ಣ ಊರಾಗಿರುವ ( ಈಗೂ ಹಾಗೇನೆ ) ಲಿಂಗಸುಗೂರು ಖ್ಯಾತಿವೆತ್ತ ದಾಸಸಾಹಿತ್ಯ ಕೇಂದ್ರವಾಯಿತು. ಆ ಊರು ಇರುವ ರಾಯಚೂರು ಜಿಲ್ಲೆಯಲ್ಲಿಯ ದಾಸಸಾಹಿತ್ಯವನ್ನು ಅತೀವ ಶ್ರಮಪಟ್ಟು, ಕಲೆಹಾಕಿದ ಗೊರಾಬಾಳ ಹನುಮಂತರಾಯರು ಲಿಂಗಸುಗೂರಿನವರು. ಪ್ರಾಣೇಶದಾಸರ ವಂಶಜರು. ಅವರ ಈ ಕೆಲಸಕ್ಕೆ ಪ್ರೇರಣೆ ದೊರೆತದ್ದು ಪ್ರಾಣೇಶದಾಸರಿಂದಲೇ.

ಪ್ರಾಣೇಶದಾಸರು, ಆ ಮುಂದಿನ ಶ್ರೀ ಭುವನೇಂದ್ರರು, ಶ್ರೀ ಸುಬೋಧೇಂದ್ರರು - ಇವರುಗಳ ಮೇಲೆಯೂ ಕೀರ್ತನೆಗಳನ್ನು ರಚಿಸಿದ್ದಾರೆ, ಭುವನೇಂದ್ರರನ್ನು 'ಪಿಂಗಳನಿಭಸನ್ಯಾಸ ಕುಲೋತ್ತಮ' ಎಂದು ಹೇಳಿದುದಲ್ಲದೆ, 'ಜನ್ಮಾರಭ್ಯವು ಲೌಕಿಕ ಸ್ವಪ್ನದೊಳರಿಯ' ಎಂಬುದಾಗಿ ವಿಶೇಷಿಸಿದುದು ಮನೋಜ್ಞವಾಗಿದೆ. ಇನ್ನೊಂದು ಹಾಡಿನಲ್ಲಿ ಭುವನೇಂದ್ರರು 'ನಮ್ಮ ದೋಷವೆಣಿಸದೆ ಬಿನ್ನಪವ ಲಾಲಿಪರು' ಎಂದಿದ್ದಾರೆ. ಇದೇ ಹಾಡಿನಲ್ಲಿ, 'ಕುಂಡಲಿಯೊ ಭಾರತಿಯೊ ಈಶನೋ',' ವಿಧಿಯೊ ಅರ್ಕನೊ ಇಂದ್ರನೋ' ಎಂಬ ತೆರದಿಂದ ಕಾಣುತ್ತಾರಾಗಿ ವಿಧ ವಿಧವಾದ ಹೋಲಿಕೆಗಳನ್ನು ಕೊಟ್ಟಿದ್ದುದು ಪ್ರಾಣೇಶದಾಸರ ಕಲ್ಪಕತೆಗೆ ಉತ್ತಮ ಉದಾಹರಣೆಯಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ ಗುರುಸಾರ್ವಭೌಮರಿಂದ ಹಿಡಿದು ಭುವನೇಂದ್ರರ ವರೆಗೆ ಯತಿಗಳನ್ನು ಕಾಯಾ ವಾಚಾ ಮನಸಾ - ಆರಾಧಿಸುತ್ತ ಮಂತ್ರಾಲಯ ಮಠದವರಲ್ಲಿ ಇಷ್ಟೊಂದು ನಿಷ್ಠೆಯನ್ನು ಹೊಂದಿದ್ದ ಬೇರಾವ ದಾಸರು ಇಲ್ಲ.

ಪ್ರಾಣೇಶದಾಸರು ಹಲವಾರು ಪೌರಾಣಿಕ ಕಥನ ಕಾವ್ಯಗಳನ್ನು ರಚಿಸಿದ್ದಾರೆ. 'ಪಾರ್ಥ ವಿಲಾಸ' - ಎಂಬ ಕೃತಿಯಲ್ಲಿ ಬಂದಿರುವ ಸುಭದ್ರಾಹರಣದ ಕಥೆಗೆ ಮಹಾಭಾರತ ತಾತ್ಪರ್ಯ ನಿರ್ಣಯದ ಅಧ್ಯಾಯ ೨೦ರ, ೧೫೧ - ೨೧೫ ಶ್ಲೋಕಗಳು ಆಧಾರವಾಗಿವೆ. ವಿವಿಧ ವೃತ್ತಗಳಲ್ಲಿ ರಚಿತವಾದ ಈ ಕಿರುಕಾವ್ಯದಲ್ಲಿ ೧೬೧ ನುಡಿಗಳಿವೆ. ಸೂಕ್ಷ್ಮವಾಗಿ ಅವಲೋಕಿಸಿದರೆ, ಅಲ್ಲಲ್ಲಿ ವಿಶಿಷ್ಟ ರೀತಿಯಾಗಿ ಪದ್ಯ ರಚಸಿದ್ದಾರೆ. ಉದಾ.ಗೆ ತುಟಿಗೆ ತುಟಿ ಹಚ್ಚದೆ - ಎಂದರೆ ಪವರ್ಗದ ಶಬ್ದವೊಂದನ್ನೂ ಬಳಸದೆ ಪದ್ಯ ರಚನೆ ಮಾಡಿದ್ದಾರೆ. ( ಪದ್ಯ ೧೪೧, ೧೪೨ ). 'ಬುಡ್ಡಿ ಬ್ರಹ್ಮನ ಕಥೆ' ಎಂಬೊಂದು ಕೃತಿ ಅವರ ಹೆಸರಿನಲ್ಲಿದ್ದು ಅದರ ವಿಷಯವೇನೊ ತಿಳಿಯದು. ಪ್ರಾಣೇಶದಾಸರು ಸಂಸ್ಕೃತದಲ್ಲಿಯೂ ರಚನೆ ಮಾಡಿದ್ದಾರೆ. ಹೀಗೆ ವೈವಿಧ್ಯಮಯವಾದ ಕೃತಿರಚನೆ ಮಾಡಿ ಗುರುಭಕ್ತಿಯಲ್ಲಿ ಮಿಗಿಲೆನಿಸಿ ೧೮೨೨ರಲ್ಲಿ ಅಸು ನೀಗಿದರು.

ಅವರ ಮಕ್ಕಳಲ್ಲಿ **ಗುರುಪ್ರಾಣೇಶವಿಠಲರೂ** ಕೀರ್ತನೆಗಳನ್ನು ರಚಿಸಿದ್ದಾರೆ. ಅವರ ಶಿಷ್ಯರ ಸಂಖ್ಯೆ ಅಗಣಿತವಾದದ್ದು. ಅವರಲ್ಲಿ ಬಳಗದವರೂ ಸೇರಿಕೊಂಡು ಅದೊಂದು ದಾಸ ಸಾಹಿತ್ಯದ ಕಮ್ಮಟವೇ ಆಗಿ ಪರಿಣಮಿಸಿತು. ಅಂಥ ಬಳಗದವರಲ್ಲಿ / ಶಿಷ್ಯ ಪ್ರಶಿಷ್ಯರಲ್ಲಿ ವರದೇಶವಿಠಲರದು ಎದ್ದು ಕಾಣುವ ಹೆಸರು. ವರದೇಂದ್ರರು ಇವರಿಗೂ ಆದರಣೀಯ ಯತಿಸ್ಥಾನದಲ್ಲಿದ್ದವರಾಗಿ, ಅವರನ್ನು ಕುರಿತು ಹಲವಾರು ಕೀರ್ತನೆ ರಚಿಸಿದ್ದಾರೆ. ಅವುಗಳಲ್ಲಿ 'ಸ್ವಪ್ನವೃಂದಾವನಾಖ್ಯಾನ' ಎಂಬುದು ಶ್ರೀ ವಾದಿರಾಜ ಯತಿಗಳ ಕೃತಿಯ ಅದೇ ಹೆಸರನ್ನು ಮಾತ್ರ ಅನುಕರಿಸಿದಂತಿದೆ. ಇದರಲ್ಲಿ ಶ್ರೀ ವರದೇಂದ್ರರು ಪ್ರಥಮ ಬಾರಿ ಲಿಂಗಸೂಗೂರಿಗೆ ಬಂದಾಗಿನಿಂದ ಹಿಡಿದು, ಪುಣೆಯಲ್ಲಿ ರಾಮಶಾಸ್ತ್ರಿಯೊಡನಾದ ವಾಕ್ಯಾರ್ಥ ಪ್ರಸಂಗ ಹಾಗೂ ಪ್ರಾಣೇಶದಾಸರ ಹಿತ್ತಿಲಲ್ಲಿ ತುಳಸೀ ವೃಕ್ಷ ಸಹಿತ ವೃಂದಾವನ ಸ್ಥಾಪನೆಯಾದದ್ದರ ವರೆಗೆ ವಿವರಗಳು ಬಂದಿವೆ. ಆರ್ಯಾ, ಷಟ್ಪದಿ ಮುಂತಾದ ವಿವಿಧ ವೃತ್ತಗಳ ೯೪ ಪದ್ಯಗಳು ಇದರಲ್ಲಿವೆ. ವರದೇಶರು ಶ್ರೀ ಸುಶೀಲೇಂದ್ರರ ಕಾಲದಲ್ಲಿ ಬಾಳಿದವರು; ಅವರನ್ನು ಸಮಕ್ಷಮ ಕಂಡವರು. ಆದ್ದರಿಂದ ಅವರನ್ನು ಸ್ತುತಿಸಿದ ಪದ್ಯವೊಂದನ್ನು ಇಲ್ಲಿ ಸೇರಿಸಲಾಗಿದೆ. ವರದೇಶರು ೧೯೧೮ರಲ್ಲಿ ಮರಣ ಹೊಂದಿದ್ದಾಗಿ ತಿಳಿಯುತ್ತದೆ.

ಈ ವರ್ಗದಲ್ಲಿ ಗುರುಶ್ರೀಶಪ್ರಾಣೇಶರನ್ನು ಹೆಸರಿಸತಕ್ಕುದು. ಅವರು ಪ್ರಾಣೇಶದಾಸರ ಸೋದರಳಿಯನೆಂದು ತಿಳಿದು ಬರುತ್ತದೆ. ಮಂತ್ರಾಲಯದ ಗುರುಸಾರ್ವಭೌಮರ ಪರಮ ಭಕ್ತರು. ಅವ್ಯಾಹತವಾಗಿ ಸೇವೆ ಸಲ್ಲಿಸಿದರು. ತಮ್ಮ ಕೈಕಾಲು ಕಳೆದುಹೋದ ಸ್ಥಿತಿಯಲ್ಲಿಯೂ ಮಂತ್ರಾಲಯ ಯಾತ್ರೆಯನ್ನು ಬಿಡಲೊಲ್ಲರು! ಆಗ ಅವರ ಶಿಷ್ಯರು ಹೊತ್ತುಕೊಂಡು ಹೋಗುತ್ತಿದ್ದರಂತೆ. ಅವರು ರಚಿಸಿದ ಹಲವಾರು ಕೀರ್ತನೆಗಳಲ್ಲಿ ವರದೇಂದ್ರರ ಮೇಲಿನವನ್ನು ಇಲ್ಲಿ ಕಾಣಬಹುದು.

ಪ್ರಾಣೇಶದಾಸರ ಪ್ರಶಿಷ್ಯರಲ್ಲಿ **ಗುರುಜಗನ್ನಾಥವಿಠಲರು** ಪ್ರಮುಖರು. ನಿಜನಾಮ ಕೋಸಗಿ ಸ್ವಾಮಿರಾಯಾಚಾರ್ಯ. ಸಂಸ್ಕೃತದಲ್ಲಿಯೂ ನಿಷ್ಣಾತರಿದ್ದರು. 'ತೂಗಿರೆ ರಾಯರ, ತೂಗಿರೆ ಗುರುಗಳ' ಎಂಬ ಅತಿ ಜನಪ್ರಿಯ ಹಾಡನ್ನು ರಚಿಸಿದವರು ಇವರೇ. ಅದು ಜಗನ್ನಾಥದಾಸರದೆಂದು ತಪ್ಪಾಗಿ ಅನೇಕರು ಭಾವಿಸುತ್ತಾರೆ. ಆ ಹಾಡಿನ ಮುದ್ರಿಕೆಯಲ್ಲಿ ಬರುವ 'ಗುರು' ಶಬ್ದವನ್ನು ಲಕ್ಷಿಸುವುದಿಲ್ಲ. ಇಲ್ಲಿ ಕೊಟ್ಟಿರುವ ಅವರ 'ವರದೇಂದ್ರಾರ್ಯರ ಪಾದಾ' ಹಾಡಿನಲ್ಲಿ ಎರಡು ಘಟನೆಗಳಿವೆ. ಶ್ರೀ ವರದೇಂದ್ರರು ಕನಸಿನಲ್ಲಿ ಬಂದು ತತ್ವವಾದವನ್ನು ನಿನ್ನ ಮಾತಿನಲ್ಲಿ ಪ್ರಚಾರ ಮಾಡು - ಎಂದು ಕೈಹಿಡಿದು ಹೇಳಿದರಂತೆ. ಇನ್ನೊಂದು ಘಟನೆ ಪ್ರಾಣೇಶವಿಠಲರ ಮರಿ ಮೊಮ್ಮಗನಿಗೆ 'ವರದೇಶ ವಿಠಲ' ಎಂಬ ಅಂಕಿತವಿಟ್ಟು ದಾಸದೀಕ್ಷೆ ಕೊಡು ಎಂದು ಹೇಳಿದುದು. **ಅಭಿನವಜನಾರ್ದನವಿಠಲರೆಂಬ** ಜಗನ್ನಾಥದಾಸರ ಶಿಷ್ಯರು 'ತುಂಗಾತೀರದಿ ನಿಂತ ಸುಯತಿ-ವರನ್ಯಾರ ಪೇಳಮ್ಮಯ್ಯ' ಎಂಬ ಸೊಗಸಾದ ಹಾಡನ್ನು ರಚಿಸಿದ್ದು ಅದೇ ಧಾಟಿ - ವಿಚಾರ ಸರಣಿಯಲ್ಲಿ 'ವರದಾತೀರದಿ ಶೋಭಿಪ...' ಎಂಬ ಹಾಡಿನಲ್ಲಿ ಶ್ರೀ ಧೀರೇಂದ್ರರನ್ನು ಸ್ತುತಿಸಿದ್ದಾರೆ. ಮಾತ್ರವಲ್ಲ, ಮಂತ್ರಾಲಯಕ್ಕೆ ಹೋಗಿ ಬಂದಾಗೊಮ್ಮೆ ಎಲ್ಲ ಹರಿದಾಸರು ಹಾಡುಗಳನ್ನು ರಚಿಸಿದ್ದಾರೆ.

ಗುರುಸಾರ್ವಭೌಮರ ಮೇಲಿನ ಹಾಡುಗಳ ಸಂಖ್ಯೆ ನಾಲ್ಕುನೂರನ್ನು ದಾಟಿದೆಯಷ್ಟೇ. ಹೀಗಿರುತ್ತ ಯಾರ, ಯಾವ ಹಾಡುಗಳನ್ನು ಇಲ್ಲಿ ಸೇರಿಸಿಕೊಳ್ಳಬೇಕು ಎಂಬ ಸಮಸ್ಯೆ ಮುಂಬಂದಿತು. ಹಾಗಾಗಿ ಬೇರೆ ಮಠಗಳ ಯತಿಗಳೇ ಆದವರ ರಚನೆಗಳನ್ನಷ್ಟೆ ಇಲ್ಲಿ ಪವಣಿಸುತ್ತಿದ್ದೇವೆ. ಒಬ್ಬರು ಸೋದೆ ಮಠದ ಶ್ರೀ **ವಿಶ್ವೇಂದ್ರತೀರ್ಥರು**( ೧೮೮೧ - ೧೯೪೩ ). ದಾಸ ಸಾಹಿತ್ಯದ ಪ್ರಾರಂಭಿಕರೆಂದು ಶ್ರೀಪಾದರಾಜ, ವ್ಯಾಸರಾಯರ ಸಮಕಾಲೀನರಾಗಿ, ಆದರೆ ಪ್ರತ್ಯೇಕವಾಗಿ ಕೀರ್ತನೆಗಳನ್ನು ರಚಿಸಿದವರು, ಶ್ರೀ ವಾದಿರಾಜರು. ಅವರ ಪರಂಪರೆಯಲ್ಲಿ ಮೂರು ನೂರು ವರ್ಷಗಳ ನಂತರ ಈ ಕೈಂಕರ್ಯಕ್ಕೆ ತೊಡಗಿದವರು - ಈ ವಿಶ್ವೇಂದ್ರರು. ಅವರು ರಚಿಸಿದ ಐವತ್ತು ಕೀರ್ತನೆಗಳ ಸಂಗ್ರಹ ಈಚೆಗೆ ಪ್ರಕಟವಾಗಿದೆ. ( ಶ್ರೀ ವಾದಿರಾಜ ಮೃತ್ತಿಕಾ ವೃಂದಾವನ, ಹಾವನೂರ, ೨೦೦೧ ) ಅತ್ಯಂತ ಸರಳ ಹಾಗೂ ರಸಸ್ಯಂದಿಯಾದ ಈ ರಚನೆಗಳು ಶ್ರೀಹರಿಯ ವಿವಿಧ ರೂಪಗಳನ್ನು, ಮತ್ತು ಗುರುಸಂಪದವನ್ನು ವರ್ಣಿಸುತ್ತವೆ. ಅವರಲ್ಲಿ ಶ್ರೀ ರಾಘವೇಂದ್ರರನ್ನೂ ಗಣಿಸಿದುದು ಅಪೂರ್ವದ ಸಂಗತಿಯಾಗಿದೆ.

ಇನ್ನೊಬ್ಬರು ವ್ಯಾಸರಾಯ ಮಠದ ಶ್ರೀ **ವಿದ್ಯಾಪ್ರಸನ್ನತೀರ್ಥರು**. ( ೧೮೯೯ - ೧೯೬೯ ). ಅವರನ್ನು ಈ ಶತಮಾನದ ಗಣ್ಯ ಹರಿದಾಸರೆಂದೇ ಬಗೆಯತಕ್ಕುದು. ಅವರು

ರಚಿಸಿದ ಕೀರ್ತನೆಗಳ ಸಂಗ್ರಹಗಳು ವ್ಯಾಸರಾಯ ಮಠದವರಿಂದ ಪ್ರಕಟವಾಗಿವೆ. ( ಆಯ್ದ ಕೀರ್ತನೆಗಳು; - ೧೯೯೯ರಲ್ಲಿ ) ಭಕ್ತಿಪುರಸ್ಸರವಾದ ಅವರ ಕೀರ್ತನೆಗಳನ್ನು ಹಳೆಯ ಮೈಸೂರು ಪ್ರದೇಶದಲ್ಲಿ ಈಗಲೂ ನಿಯಮಿತವಾಗಿ ಹಾಡುವವರಿದ್ದಾರೆ. ರಾಯರ ಮೇಲೆ ಅವರು ರಚಿಸಿದ ಮೂರು ಕೀರ್ತನೆಗಳಿವೆ.

ಮೂರನೆಯ ಹಾಡು ಸಾಗರಕಟ್ಟೆಯ ಶ್ರೀ ಪ್ರದ್ಯುಮ್ನತೀರ್ಥರದು. ಪೂರ್ವಾಶ್ರಮದಲ್ಲಿದ್ದಾಗ ಮಂತ್ರಾಲಯಕ್ಕೆ ಹೋಗಿ ಬಹುಕಾಲ ರಾಯರ ಸೇವೆ ಮಾಡಿದ್ದರು. ಕುಂದಾಪುರ ವ್ಯಾಸರಾಯ ಮಠದ ಶ್ರೀ ಲಕ್ಷ್ಮೀಪ್ರಿಯತೀರ್ಥರಿಂದ ಆಶ್ರಮ ಸ್ವೀಕರಿಸಿ, ಸಾಗರಕಟ್ಟೆಯಲ್ಲಿ ನೆಲೆನಿಂತರು. ಅದೇ ಹೆಸರಿನಲ್ಲಿ ಅವರ ಮಠವು ಅಸ್ತಿತ್ವಕ್ಕೆ ಬಂದಿತು. ಈಚೆಗೆ ವೃಂದಾವನಸ್ಥರಾದರು. ( ೧೮೯೦-೧೯೭೫ ). 'ನರಹರಿ' ಅಂಕಿತದಿಂದ ರಚಿತವಾದ ಅವರ ಸಂಗ್ರಹ ಪ್ರಕಟವಾಗಿದೆ. ( ಕರ್ನಾಟಕ ಹರಿದಾಸ ಸೈಂಟಿಫಿಕ್ ರಿಸರ್ಚ್ ಸೆಂಟರ್, ಬೆಂಗಳೂರು, ೧೯೯೬ ). ಅವರ ಹಾಡುಗಳ ಒಂದು ವಿಶೇಷತೆ ಎಂದರೆ ವಿನಯ ವೈರಾಗ್ಯಭಾವದ ಗರಿಷ್ಠ ಅಭಿವ್ಯಕ್ತಿ. "ಪ್ರಾಯದಿ ನಾನು ಮಾನಾಪೇಕ್ಷೆ ಮಾಡಿದೆ. ಮೌನಿವೇಷವನೆ ಧರಿಸಿ ಹೀನಾಚರಣೆಯಲ್ಲಿರುವೆ" ಎಂದು ಶ್ರೀ ರಾಘವೇಂದ್ರರಲ್ಲಿ ನಿವೇದಿಸುವಷ್ಟು ವಿನಯವಂತರು.

**ಇಪ್ಪತ್ತನೆಯ ಶತಮಾನದವರು**

ಈ ಶತಮಾನದವರಲ್ಲಿ ಮೊದಲಿಗೆ ಹೆಸರಿಸಬೇಕಾದವರು ಅಭಿನವ **ಪ್ರಾಣೇಶ** ವಿಠಲರು. ಪ್ರಾಣೇಶವಿಠಲರ ದಾಸಪೀಳಿಗೆಯಲ್ಲಿ ಎದ್ದು ಕಾಣುವಂತಹುರು. ( ೧೯೦೨ - ೧೯೭೭ ) ಹನುಮಂತರಾವ್ ಎಂದವರ ಹೆಸರು. ಅವರು ರಚಿಸಿದ ಅನೇಕ ಹಾಡುಗಳಲ್ಲಿ ವರದೇಂದ್ರರನ್ನು ಸ್ತುತಿಸಿದ 'ವೃಂದಾರಕೇಂದ್ರ ಯತಿ' ಎಂಬ ಹಾಡನ್ನು ಇಲ್ಲಿ ಆಯ್ದುಕೊಂಡಿದೆ. ಇದು ಅಶ್ವಧಾಟಿಯಲ್ಲಿದ್ದು (ವಾದಿರಾಜ ಗುರುವರರ 'ಪ್ರೋಷ್ಠೀಶ ವಿಗ್ರಹಸು.... ಎಂಬಂತೆ) ಹಾಡಲು ಅತ್ಯಂತ ಹೃದ್ಯವಾಗಿದೆ.

'ಕಾರ್ಪರ ನರಹರಿ' ಎಂಬ ಮುದ್ರಿಕೆಯ ಕೊಪ್ಪರ ಗಿರಿಯಾಚಾರ್ಯರು, ದಾಸ ಸಾಹಿತ್ಯದ ದೀರ್ಘ ಪರಂಪರೆಯಿದ್ದ, ಕೊಪ್ಪರ ಕ್ಷೇತ್ರದ ಶ್ರೀ ಲಕ್ಷ್ಮೀನರಸಿಂಹದೇವರ ಅರ್ಚಕರ ಮನೆತನದಲ್ಲಿ ಜನಿಸಿದರು. ಇಭರಾಮಪುರದ 'ಅಪ್ಪಾ' ಅವರ ಕೃಪಾಶೀರ್ವಾದ ಮತ್ತು ಯೆಳಮೇಲಿ ವಿಠಲಾಚಾರ್ಯರ ಅಧ್ಯಾಪನದಿಂದ ಶಾಸ್ತ್ರವೇತ್ತರಾದರು. ಭಾಗವತ ಸಾರೋದ್ಧಾರದ ಅಖಂಡ ಪಾರಾಯಣ / ಪ್ರವಚನಗಳಲ್ಲಿ ನಿರತರಾಗಿರುತ್ತಿದ್ದರು. ಜೊತೆಗೆ ಕೀರ್ತನ ರಚನೆಯೂ ಸಾಗಿದ್ದಿತು.

ಅವರು ರಚಿಸಿದ ಕೀರ್ತನೆಗಳಲ್ಲಿ ಶ್ರೀ ರಾಯರ ಮೇಲಿನ ಹಾಡುಗಳು ವಿಶೇಷ ಪ್ರಚಾರದಲ್ಲಿದ್ದು, ರಾಯಚೂರಿನ ಗುರುರಾಜ ಭಜನಾ ಮಂಡಳಿಯುವರು ಅವರ ಎಲ್ಲ

ಕೀರ್ತನೆಗಳನ್ನು 'ತಾರತಮ್ಯೋಕ್ತ ಭಜನಾಮೃತಕಲಶ' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ. ನಾವು ಆಯ್ದುಕೊಂಡದ್ದು ಶ್ರೀ ವರದೇಂದ್ರ ಸ್ತುತಿಪರ ಒಂದು ಕೀರ್ತನೆಯನ್ನು.

ಪ್ರಸನ್ನಶ್ರೀನಿವಾಸರು ( ಮೊದಲಿನ ಹೆಸರು ಪುರುಷೋತ್ತಮರಾವ್ ) ಪೂರ್ಣವಾಗಿ ೨೦ನೆಯ ಶತಮಾನದವರು. ಎಂದರೆ ೧೯೦೬ರಲ್ಲಿ ಜನಿಸಿ ೧೯೯೫ರವರೆಗೆ ಬಾಳಿದವರು. ಹುಟ್ಟಿದ್ದು ತಮಿಳುನಾಡಿನಲ್ಲಿ. ಅವರ ತಾಯಿ ಶ್ರೀ ರಾಘವೇಂದ್ರರ ಸೇವೆ ಮಾಡಿದ್ದರ ಫಲವಾಗಿ ಜನಿಸಿದುದಂತೆ. ಬಾಲ್ಯದಲ್ಲಿ ತಂದೆ ತಾಯಿಗಳೊಡನೆ ಸೋದೆಯಲ್ಲಿ ಸೇವೆ ಮಾಡಿದಾಗ ಶ್ರೀ ವಾದಿರಾಜ ಯತಿಗಳು ವಿಶೇಷ ಅನುಗ್ರಹ ಮಾಡಿದ್ದರ ಫಲವಾಗಿ ತಮಗೆ ಶಾಸ್ತ್ರ ಸಾಹಿತ್ಯಗಳು ಕರಗತವಾದುದೆಂದು ನಂಬಿದ್ದರು. ಅವರು ಪ್ರಾಥಮಿಕವಾಗಿ ಕಲಿತದ್ದು ತಮಿಳು; ಕನ್ನಡವಲ್ಲ. ಅಧ್ಯಯನ ವಿಚಾರದಲ್ಲಿ ಅವರಿಗೆ ಲೌಕಿಕ ಗುರುಗಳಾರೂ ಇರಲಿಲ್ಲವಾದ್ದರಿಂದ ಶ್ರೀ ವಾದಿರಾಜರ ವಿಶೇಷಾನುಗ್ರಹವೇ ಕಾರಣವೆನ್ನಲಾಗುತ್ತದೆ.

ಅವರ ಕನ್ನಡ ಪದ್ಯರಚನೆ ಎರಡು ರೀತಿಯಲ್ಲಿ ಎದ್ದು ಕಾಣುವಂತಿದೆ. ಒಂದು, ಬ್ರಹ್ಮಸೂತ್ರಾಮೃತ ಸಾರ - ವಿಷ್ಣುಸಹಸ್ರನಾಮ, ಶ್ರೀಹರಿಪ್ರಾದುರ್ಭಾವ, ನಿರ್ಣಯ ರಾಮಾಯಣ ಮುಂತಾಗಿ ಸಂಸ್ಕೃತದಲ್ಲಿರುವ ಶಾಸ್ತ್ರ-ಸ್ತೋತ್ರಗಳನ್ನು ಕನ್ನಡ ಪದ್ಯರೂಪಕ್ಕೆ ಅಳವಡಿಸಿದುದು, ಇನ್ನೊಂದು, ಶ್ರೀ ಪದ್ಮನಾಭತೀರ್ಥರಿಂದ ಮೊದಲುಗೊಂಡು 'ಇಭರಾಮಪುರದ ಅಪ್ಪಾ' ಅವರ ವರೆಗೆ ಆಗಿಹೋದಂಥ ಅನೇಕ ಯತಿ ದಾಸರುಗಳ ಚರಿತ್ರೆಯನ್ನು ಪದ್ಯರೂಪದಲ್ಲಿ ಕೊಡಮಾಡಿದುದು. ಇಷ್ಟು ಜನ ಮಹಿಮಾನ್ವಿತರ ಸಣ್ಣ ಪುಟ್ಟ ವಿವರಗಳನ್ನು ಅದ್ಹೇಗೆ ಕಲೆಹಾಕಿದರೆಂಬುದಕ್ಕೆ ಯಾವ ಬಾಹ್ಯ ಆಧಾರವೂ, ಅವರು ಈಚಿನವರಾದರೂ, ನಮಗೆ ದೊರೆತಿಲ್ಲ. ಮತ್ತಲ್ಲದೆ ವರ್ಣಿತರಾದ ಈ ಯತಿಗಳಲ್ಲಿ ಉತ್ತರಾದಿಮಠದ ಶ್ರೀ ಸತ್ಯಸಂಧ ಮುಂತಾದವರಿದ್ದಾರೆ. ಜೊತೆಗೆ ಮಂತ್ರಾಲಯ ಮಠದ ಸರ್ವಶ್ರೀ ವಿಜಯೀಂದ್ರ, ಸುಧೀಂದ್ರ, ರಾಘುವೇಂದ್ರ, ವರದೇಂದ್ರ ಹಾಗೂ ಧೀರೇಂದ್ರ ವಿಭೂತಿಗಳ ಮೇಲೆಯೂ ಕಥನ ಪದ್ಯಗಳಿವೆ. ಲೌಕಿಕ ವ್ಯಕ್ತಿಯಾಗಿದ್ದರೂ ಅವರದು 'ಅಲೌಕಿಕ ವ್ಯಕ್ತಿತ್ವ. ಇದರಿಂದಾಗಿ ಅವರ ಭಕ್ತರ ಸಂಖ್ಯೆ ಹೆಚ್ಚುತ್ತಲೇ ಇದೆ. ಇಲ್ಲಿ ನಾವು ಶ್ರೀ ಧೀರೇಂದ್ರರ ಮೇಲಿನ ಅವರ ಪದ್ಯವನ್ನು ಅಳವಡಿಸಿಕೊಂಡಿದ್ದೇನೆ.

ಶಾಮಸುಂದರವಿಠಲದಾಸರ ನಿಜವಾದ ಹೆಸರು ಬಲ್ಲಟಗಿ ಗುಂಡಾಚಾರ್ಯ ಎಂಬುದು. ಈ ಅಂಕಿತವನ್ನು ಪ್ರಾಯಶಃ ಅಸ್ಕಿಹಾಳ ಗೋವಿಂದದಾಸರಿಂದ ಪಡೆದರೆಂಬ ಐತಿಹ್ಯವಿದೆ. ಅವರು ಆಶುಕವಿಗಳು; ಪ್ರಾಸಾದಿಕ ಕವಿಗಳೂ ಅಹುದು. ಅನೇಕ ಕೀರ್ತನೆಗಳನ್ನು ರಚಿಸಿದ್ದುದರ ಜೊತೆಗೆ ಲಂಕಾದಹನ, ಶ್ರೀನಿವಾಸ ಕಲ್ಯಾಣ, ಸುಭದ್ರಾ ಪರಿಣಯ ಮುಂತಾದ ಖಂಡಕಾವ್ಯಗಳನ್ನೂ ರಚಿಸಿದ್ದಾರೆ. ಮಾನವೀಯ ಅಂತಃಕರಣದ ವ್ಯಕ್ತಿ. ಅವರ ಶಿಷ್ಯವರ್ಗದಲ್ಲಿ ಮುತ್ತಯ್ಯನೆಂಬ ಅಂತ್ಯಜನೂ ಇದ್ದ. ಮಾನ್ವಿ,

ರಾಯಚೂರ ಕಡೆಗಳಲ್ಲೆಲ್ಲ ಅವರನ್ನು ಕಂಡಿದ್ದವರು ನೆನೆಯುವವರು ಈಗಲೂ ಇದ್ದಾರೆ. ಅವರ ಕೀರ್ತನೆಗಳ ಸಂಗ್ರಹ. ಹಾಗೂ ರಾ. ಗು. ಜೋಶಿ ಕೃತ ಜೀವನ ಚರಿತೆ - ಇವನ್ನು ಮಾಸ್ಟಿಯ ಶ್ರೀರಂಗನಾಥ ಪ್ರಕಾಶನದವರು ಹೊರತಂದಿದ್ದಾರೆ.

ಇಪ್ಪತ್ತನೆಯ ಶತಮಾನದವರಾಗಿ ಇಂದಿಗೂ ಸುದೈವದಿಂದ ನಮ್ಮೊಂದಿಗೆ ಇರುವವರೆಂದರೆ ಸರ್ವಶ್ರೀ ಕಮಲೇಶರು, ಲಕುಮೀಶರು ಹಾಗೂ ಧೀರವಿಠಲರು. ಕಮಲೇಶರೆಂದರೆ ಯಾರೆಂಬುದು ಅನೇಕರಿಗೆ ಗೊತ್ತಿಲ್ಲ. ಅವರು ಮಾನ್ಯ ರಾಜಾ ಎಸ್. ಗುರುರಾಜಾಚಾರ್ಯರೆಂಬ ಶ್ರೀಪಾದಪುತ್ರರು. ಅಕ್ಷರಶಃ ಜ್ಞಾನ - ವೃದ್ಧರು. ಸದ್ದಿಲ್ಲದೆ ಆತ್ಮಸ್ಸುಖಾಯ ಕೆಲವು ಕೀರ್ತನೆಗಳನ್ನು ರಚಿಸಿದ್ದಾರೆ. ಮುಖ್ಯತಃ ಅವರ ಅಜರಾಮರ ಕೃತಿ, 'ಅಜಯ್ಯ ವಿಜಯೀಂದ್ರರು' ಎಂಬುದು. ವಿದ್ವತ್ಪ್ರಚುರವಾಗಿ, ಆ ಮಹಾನುಭಾವರ ವ್ಯಕ್ತಿತ್ವವನ್ನು ವಿಶದಗೊಳಿಸುವ ಉತ್ತಮೋತ್ತಮ ಗ್ರಂಥ, ಅದಾಗಿದೆ. ಅಷ್ಟಾಗಿಯೂ ಕಾದಂಬರಿಯಂತೆ ಸರಾಗವಾಗಿ ಓದಿಸಿಕೊಂಡು ಹೋಗುತ್ತದೆ. ( ಈ ಗ್ರಂಥದಿಂದಲೇ ಶ್ರೀ ವಿಜಯೀಂದ್ರರು ಹಾಗೂ ಶ್ರೀ ಅಪ್ಪಯ್ಯ ದೀಕ್ಷಿತರ ನಡುವೆ ಜರುಗಿದ ಸಂವಾದ - ವಾಕ್ಯಾರ್ಥ ಭಾಗಗಳನ್ನು ಆಯ್ದು ಅನುಬಂಧ - ೩ ರಲ್ಲಿ ಕೊಟ್ಟಿದೆ. )

'ಲಕುಮೀಶ' ಅಂಕಿತದ ಶ್ರೀ ಕುರುಡಿ ರಾಘವೇಂದ್ರಾಚಾರ್ಯರು ಇಂದಿಗೂ ಮಂತ್ರಾಲಯ ನಿವಾಸಿಗಳು. ಇವರಿಗೆ ಪದರಚನೆಯ ಪ್ರೇರಣೆ ನೀಡಿದವರು ದೊಡ್ಡಪ್ಪ ಶ್ಯಾಮಸುಂದರದಾಸರೇ. ಅವರ ಮುತ್ತಾತ ಕೊಪ್ರೇಶಾಚಾರ್ಯರು ಶ್ರೀ ಸುಶೀಲೇಂದ್ರರ ಕಾಲಕ್ಕೆ ಮಂತ್ರಾಲಯದಲ್ಲಿ ಪೌರೋಹಿತ್ಯ ಮಾಡಿಕೊಂಡು ಇದ್ದರು. ಆ ಬಳುವಳಿ ಮುಂದುವರಿಯಿತು. ಶಾಮಸುಂದರದಾಸರು ಇವರಿಗೆ 'ಲಕುಮೀಶ' ಎಂಬ ಮುದ್ರಿಕೆಯನ್ನು ಕೊಟ್ಟು ಕವಿತಾರಚನೆಗೆ ಚಾಲನೆ ಇತ್ತರು. ಅವರ ಕೀರ್ತನೆಗಳ ಎರಡು ಸಂಕಲನಗಳು ಪ್ರಕಟವಾಗಿದ್ದು ಒಂದರಲ್ಲಿ ಮಂತ್ರಾಲಯ ಮಠದ ಆ ೨೮ ಜನ ಯತಿವರ್ಯರೊಬ್ಬೊಬ್ಬರ ಮೇಲೆಯೂ ಪದ್ಯ ರಚಿಸಿದ ಹೆಗ್ಗಳಿಕೆ ಅವರದು. ಅಂತೆಯೇ ನಮ್ಮೀ ಗ್ರಂಥದಲ್ಲಿ ಅವರು ರಚಿಸಿದ ಹಾಡುಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ.

'ಧೀರವಿಠಲ' ಮುದ್ರಿಕೆಯ ಶ್ರೀ ಧೀರಣ್ಣ ವೈದ್ಯರು ಕಂಪಲಿಯ ನಿವಾಸಿಗಳು. ಮಂತ್ರಾಲಯದ ಮಠದ ಕಟ್ಟಾನುಯಾಯೀ ಮನೆತನ. ಧೀರಣ್ಣ ಅವರು ಮೋಹನದಾಸರ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಈಚೆಗಿನ ( ೨೦೦೧ ) ಅವರ ಸಂಕಲನ 'ವರದಾ ತೀರದ ಯತಿವರೇಣ್ಯರು' ಎಂಬುದು, ರಿತ್ತಿಯಲ್ಲಿ ವೃಂದಾವನಸ್ಥರಾದ ಶ್ರೀ ಧೀರೇಂದ್ರ ಹಾಗೂ ಶ್ರೀ ಸುಶೀಲೇಂದ್ರರ ಚರಿತ್ರೆಯ ಹಾಗೂ ಅವರ ಸ್ತುತಿಪರ ಹಾಡುಗಳನ್ನು ಒಳಗೊಂಡಿದೆ.

—

# ಶ್ರೀ ಗುರು ಪರಂಪರೆ

ಶ್ರೀ ಮಂತ್ರಾಲಯ ಮಠದ (ವಿದ್ಯಾಮಠ) ಮಹಾನ್ ಪರಂಪರೆಯು ಶ್ರೀ ಹಂಸನಾಮಕ ಪರಮಾತ್ಮನಿಂದ ಆರಂಭವಾಗಿ, ಕಲಿಯುಗದಲ್ಲಿ ಶ್ರೀ ಮನ್ಮಧ್ವಾಚಾರ್ಯರಿಂದ ಪ್ರಸ್ಥಾಪಿತವಾಯಿತು, ಅವರ ಅನಂತರ ಪೂಜ್ಯ ಶ್ರೀ ಪದ್ಮನಾಭತೀರ್ಥರೂ, ಶ್ರೀ ನರಹರಿತೀರ್ಥರು, ಶ್ರೀ ಮಾಧವ ತೀರ್ಥರು, ಶ್ರೀ ಅಕ್ಷೋಭ್ಯತೀರ್ಥರು, ಶ್ರೀ ಜಯತೀರ್ಥರು ಶ್ರೀ **ವಿದ್ಯಾಧಿರಾಜರೇ** ಮೊದಲಾದವರು ಮಧ್ವಮತ ಪ್ರಸಾರದಲ್ಲಿ ಅವಿಚ್ಛಿನ್ನವಾಗಿ ಪರಿಶ್ರಮಿಸಿದರು. ಅನಂತರದ ಶ್ರೀ ರಾಮಚಂದ್ರತೀರ್ಥರು, ಶ್ರೀ ವಿಬುಧೇಂದ್ರತೀರ್ಥರಿಗೆ ಆಶ್ರಮವಿತ್ತರು. ಅವರ ಕಾಲದಿಂದ ಈಚಿನವರೆಗೆ ತನ್ನದೇ ಆದ ವ್ಯಕ್ತಿತ್ವವನ್ನು ರೂಪಿಸಿಕೊಂಡು ಶ್ರೀಮಠವು ಮೊಳಗುತ್ತಿದೆ. ಶ್ರೀಮಠದ ಮಕುಟ ಮಣಿಗಳಂತಿದ್ದವರು ಶ್ರೀ ವಿಜಯೀಂದ್ರತೀರ್ಥರು ಹಾಗೂ ಶ್ರೀ ರಾಘವೇಂದ್ರ ಗುರುಸಾರ್ವಭೌಮರೆಂಬುದು ತಿಳಿದ ವಿಷಯ.

ಪ್ರಕೃತ ಈ ಪರಂಪರೆಯನ್ನು ಈರ್ವರು ದಾಸರು ವರ್ಣಿಸಿದ್ದಾರೆ. ಒಬ್ಬರು ಪ್ರಾಣೇಶದಾಸರು. ೧೯ನೆಯ ಶತಮಾನದಲ್ಲಿ ಬಾಳಿದ ಈ ದಾಸರು ತಮ್ಮ ಜೀವಿತ ಕಾಲದಲ್ಲಿ ಕಂಡಿದ್ದ ಶ್ರೀ ಸುಬೋಧೇಂದ್ರರ ವರೆಗೆ ಮಾತ್ರ ಸ್ತುತಿಸಿದ್ದಾರೆ. ಇನ್ನೊಬ್ಬರು ನಮ್ಮ ಕಾಲದವರೇ ಆದ ಕಂಪಲಿಯ ಶ್ರೀ ಧೀರಣ್ಣ ವೈದ್ಯರು. 'ಧೀರವಿಠಲ' ಎಂಬ ಮುದ್ರಿಕೆಯಿಂದ ಇಂದಿಗೂ ಕೃತಿರಚನೆ ಮಾಡುತ್ತಲಿದ್ದಾರೆ.



[ರಾಗ: ಭೈರವಿ ಅಟ್ಟತಾಳ]

ಗುರುಗಳನನುದಿನ ನೆನೆವೆ ನಾ
ದುರಿತ ದಟ್ಟುಳಿ ಸಾರೆ ಬಂದೀತಿನ್ನೇನಾ ಪ.

ಪಾರ್ಥರಕ್ಷಕನ ಸೇವಾರ್ಥ ಖಳರ ಕೊಂದು
ಕೀರ್ತಿ ಪಡೆದ ಸುಖತೀರ್ಥರೆಂತೆಂಬಾ ೧

ನೀ ಪಾಲಿಸೆಂದೆನಲಾಪತ್ತು ಬಿಡಿಸುವ
ಮಾಪತಿ ನಿಜದೂತ ಶ್ರೀ ಪದ್ಮನಾಭ ೨

ಕರಿಪತಿ ಬಳಿಯಿಂದ ಧರಜಪತಿಯ ತಂದು
ಗುರುಗಳಿಗಿತ್ತೀಹ ನರಹರೀತೀರ್ಥ ೩

ಬಾದರಾಯಣ ದಿವ್ಯ ಪಾದಜಲಜ ಭೃಂಗ
ಭೂದೇವ ವಂದಿತ ಮಾಧವತೀರ್ಥ ೪

ಇಕ್ಷುಚಾಪನ ಮ್ಯಾಳ ಲಕ್ಷ್ಯ ಇಲ್ಲದೆ ಬಲು-
ಪೇಕ್ಷೆ ಮಾಡಿದ ಅಕ್ಷೋಭ್ಯಮುನಿಪ ೫

ದಯಮಾಡಿರೆಂದು ವಿನಯದಿಂದ ಭಜಿಪರ
ಬಯಸಿ ಪೂರೈಸುವ ಜಯತೀರ್ಥರೆಂಬ ೬

ಅದ್ವೈತಗಜಸಿಂಹ ಮಧ್ವಮತೋದ್ಭವ
ಸದ್ವೈಷ್ಣವ ಪ್ರೀಯ ವಿದ್ಯಾಧಿರಾಜ ೭

ಸಂದೇಹವಿಲ್ಲದೇ ವಂದಿಪ ಜನರಾಸೆ
ತಂದುಕೊಡುವ ದಯಸಿಂಧು ಕವೀಂದ್ರ ೮

ರಾಗವರ್ಜಿತ ಭಾಗವತರ ಪಾಲ
ಯೋಗಿಶಿರೋಮಣಿ ವಾಗೀಶಮುನಿಪ ೯

ಸಾರಿದ ಭಕುತರ ಘೋರಿಪ ಅಘಗಳ
ದೂರ ಓಡಿಸುತಿಪ್ಪ ಶ್ರೀ ರಾಮಚಂದ್ರ ೧೦

ಶುಭವನದೊಳಿರುವರ ಸೊಬಗಿನಿಂದಲಿ ನೋಡಿ
ಅಭಯ ಕೊಡುತಿಪ್ಪ ವಿಬುಧೇಂದ್ರತೀರ್ಥ ೧೧

ಭ್ರಾಮಕ ಜನಶಿಕ್ಷ ಧೀಮಂತ ಜನಪಕ್ಷ
ಹೇಮ ವರಣಾಂಗ ಜಿತಾಮಿತ್ರ ಮುನಿಪಾ ೧೨

ಬಗೆಬಗೆ ಭಜಿಸಲು ಈಗಡ ಜನರ ಸೊಲ್ಲ
ಬಗಿವಾನು ಸುಜನರ ರಘುನಂದನಾರ್ಯ ೧೩

ಪೊಂದಿದವರ ನೋಯದಂದದಿ ಸಲಹುವ
ಎಂದೆಂದು ಬಿಡ ಶ್ರೀ ಸುರೇಂದ್ರಾಖ್ಯ ಮುನಿಪ ೧೪

ನಿಜಭಕ್ತಿಯಲಿ ಪಾದ ಭಜಿಸೂವ ಅಗಣಿತ
ಸುಜನರ ಸಲಹುವ ವಿಜಯೀಂದ್ರ ಮುನಿಪ ೧೫

ವೀಂದ್ರವಾಹನ ಯಾದವೇಂದ್ರಾಂಘ್ರಿ ಭಜಿಸುವ
ಸಾಂದ್ರ ಭಕ್ತಿಯಲಿ ಸುಧೀಂದ್ರಾಖ್ಯ ಮುನಿಪ ೧೬

ಧಾರುಣಿಯೊಳಗತಿ ಚಾರುವೃಂದಾವನ -
ದೀ ರಾಜಿಸುತಿಪ್ಪ ಶ್ರೀ ರಾಘವೇಂದ್ರಾ ೧೭

ಶ್ಲಾಘೀತ ಗುಣನಿಧಿ ಮಾಗಧರಿಪು ದಾಸ
ರಾಘವೇಂದ್ರರ ಪುತ್ರ ಯೋಗೀಂದ್ರತೀರ್ಥ ೧೮

ವೈರಾಗ್ಯ ಗುಣದಿಂದ ಮಾರಾರಿಯಂದದಿ
ತೋರುವನನುದಿನ ಸೂರೀಂದ್ರತೀರ್ಥ ೧೯

ಕುಮತವೆಂಬಗಣೀತ ತಿಮಿರ ಓಡಿಸುವಲ್ಲಿ
ಕಮಲಾಪ್ತನಂತಿಹ ಸುಮತೀಂದ್ರತೀರ್ಥ ೨೦

ಸಲ್ಲದ ಸುಖಗಳೆಲ್ಲವು ಜರಿದ ಶ್ರೀ-
ನಲ್ಲನ ಭಜಿಸಲು ಬಲ್ಲ ಉಪೇಂದ್ರ ೨೦

ಮೋದಮುನಿಮತ ಮಹೋದಧಿಚಂದ್ರ ವಿ -
ದ್ಯಾದಿ ದಾನಾಸಕ್ತ ವಾದೀಂದ್ರತೀರ್ಥ ೨೧

ಬಿಸಜನಾಭನ ದೂತ ವಸುಧಿಯೊಳಗೆ ಖ್ಯಾತ
ಕಿಸಲಯೋಪಮ ಪಾದ ವಸುಧೀಂದ್ರತೀರ್ಥ ೨೨

ಪರಮತೋರಗವೀಪ ಕರುಣಿ ವಿಗತ ಕೋಪ
ವರವೇದ ಸುಕಲಾಪ ವರದೇಂದ್ರಭೂಪ ೨೪

ಸುವಿವೇಕಿಗಳಿಗಿಷ್ಟ ತವಕದಿಂದಲಿ ಈವ
ಕವಿಭಿರೀಡಿತ ಪಾದ ಭುವನೇಂದ್ರತೀರ್ಥ ೨೫

ಶಬರಿವಲ್ಲಭನಂಘ್ರಿ ಅಬುಜಾಳಿಸೂರ್ಯ ಸ -
ನ್ನಿಭ ವಾದಿಗಜಸಿಂಹ ಸುಬೋಧೇಂದ್ರತೀರ್ಥ ೨೬

ಪ್ರಾಣೇಶವಿಠಲನ ಕಾಣಬೇಕಾದರೇ
ಈ ನಮ್ಮ ಗುರುಗಳ ಧ್ಯಾನದೊಳಿಹುದೊ ೨೭

■ ■ ■

## ೨

ಗುರು ಪರಂಪರ ಸ್ಮರಿಸೋ ನಿರಂತರ ಪ.
ಗುರುತರ ಶೃತಿ ಪಥದಿ ಗುರುಮಧ್ವೇಶನ |
ಗುರುತ ನರಿತು ಪಡೆವ ಗುರುತರಾನಂದಕೆ ಅ.

ಹಂಸನಾಮಕ ಹರಿಯ ಪರಮ ಹಂಸ ರರ್ಚಿಸಿ |
ಧ್ವಂಸಗೊಳಿಸು ತರಿಯ ಹರಿವಂಶರೆನಿಸಿವ ೧

ಪದ್ಮನಾಭನೆ ಗುರು ಹೆದ್ದೈವ ನೆಂದರುಹಿ ।
ಶುದ್ಧ ಮತವ ಸಾರ್ದ ಗುರು ಮಧ್ವರಾಯರ ೨

ಮಧ್ವರ ಸುತರೆನಿಸಿ ಬದ್ಧ ಮಾಯ್ಗಳ ತರಿದ
ಸಿದ್ಧ ಗಜ ಗಹ್ವರದ ಪದ್ಮನಾಭಯತಿಯ ೩

ಅಜ ಪಿತ ರಾಮನ ಗಜಪತಿ ಗೃಹದಿಂದ ।
ಭಜಿಸಿ ವಲಿಸಿದ ಪೂಜ್ಯ ನರಹರಿತೀರ್ಥರ ೪

ಮೋದ ಮಡದಿ ಆದಿ ಮಾಧವನ ಕೀರ್ತಿಯ ।
ಮೇದಿನಿಲಿ ಸಾರಿದ ಗುರು ಮಾಧವಾರ್ಯರ ೫

ಹರಿಮತ ಕೀರ್ತಿ ಗೌರಿ ಶಂಕರ ಗಿರಿ ಗೊಯ್ದು ।
ಗುರು ಅಕ್ಷೋಭ್ಯರ ಚರಣ ವಾರಿಜ ಸ್ಮರಿಸಿ ೬

ಸುಧೆಯ ಸವಿದು ಸಾರ್ಥ ಮಾಧವನಿಂಗಿತ ।
ಮೋದದಿ ಬಿತ್ತಿದ ಸಾಧು ಜಯಾರ್ಯರ ೭

ಮಧ್ವರಾಯರ ತತ್ವ ಸುಧೆಯ ಸದ್ಬೋಧವ ।
ವಿದ್ವಜ್ಜನಕೂಣಿಸಿದ ವಿದ್ಯಾಧಿರಾಜರ ೮

ವರಹಜೆ ತೀರದ ಕರಿಗಹ್ವರದಲಿ ।
ಹರಿಯ ಧ್ಯಾನಿಪ ಗುರು ಕವೀಂದ್ರತೀರ್ಥರ ೯

ಯೋಗಿ ಎನಿಸಿ ಹರಿ ಭಾಗ್ಯವ ಸವಿಯುತ
ಯೋಗ್ಯ ಪಥವ ತೋರ್ದ ವಾಗೀಶ ತೀರ್ಥರ ೧೦

ರಾಮ ರಾಮ ರಾಮರ ರಮಣೀಯ ಪೀಠದಿ
ಪಮ್ಮನ ದ್ಯರ್ಚಿಸಿದ ರಾಮ ಚಂದ್ರಾರ್ಯರ ೧೧

ಭಾರತೀಶನ ತತ್ವ ಭರತ ಖಂಡದಿ ಸಾರಿ
ನರಹರಿ ನೊಲಿಸಿದ ಗುರು ವಿಭುದೇಂದ್ರರ ೧೨

ಭಾಗವತವ ಘರಿಸಿ ಭಾರ್ಗವೀಶನೊಲಿಸಿದ ।
ಯೋಗಿ ಜಿತಾಮಿತ್ರ ವಿರಾಗಿ ಶ್ರೇಷ್ಠರ ೧೩

ಮೂಲ ರಾಮನ ಯೋಗ ಬಲದಲಿ ವೊಲಿಸುತ ।
ಇಳೆಯೊಳ್ವಾಡಿದ ಯತಿ ತಿಲಕರಘುನಂದನರ ೧೪

ಧರೆಯ ಸುತ್ತೀ ಸುತ್ತೀ ಗುರುಮಧ್ವಮತವನೇ ।
ಸಾರಿದ ಗುರುವರ್ಯ ಸುರೇಂದ್ರತೀರ್ಥರ ೧೫

ಚತುರ ಶತ ಕೃತಿಲಿ ಚತುರ ಮುಖ ಜನಕನ ।
ಪ್ರಾರ್ಥಿಪ ಗುರು ವಿಜಯ ಅಜೇಯ ವಿಜಯೀಂದ್ರರ ೧೬

ಹೃದಯ ಪೀಠದಿ ಪದುಮ ನಾಭನರ್ಚಿಸಿ ।
ಮೋದ ಮತವ ಸಾರ್ದ ಸುಧೀಂದ್ರ ತೀರ್ಥರ ೧೭

ಗುರುವಿನ ಪಥದಲಿ ನರಹರಿ ನೊಲಿಸುತ ।
ಪರಿವಾರ ಪೊರೆಯುವ ಗುರುರಾಘವೇಂದ್ರರ ೧೮

ಗುರುರಾಘವೇಂದ್ರರ ವರ ಪುತ್ರರೆನಿಸುತ ।
ಗುರುಶಾಸ್ತ್ರ ಭೋಧಿಸಿದ ಗುರುಯೋಗೀಂದ್ರಾರ್ಯರ ೧೯

ಸೂರಿಗಳ್ವೊಲಿಸಿದ ಸಿರಿಮೂಲರಾಮನ ।
ಕೀರ್ತಿ ಸ್ವರ್ಚಿಪ ಗುರು ಸೂರೀಂದ್ರ ತೀರ್ಥರ ೨೦

ತಂತ್ರ ಸಾರವ ಗ್ರಹಿಸಿ ಮಂತ್ರ ವಂದ್ಯ ನರಿತು ।
ಚಿಂತಿಪರಿ ಗೊಲಿಯುವ ಸಂತ ಸುಮತೀಂದ್ರರ ೨೧

ತಾಪ ಸೋತ್ತುಮ ರೆನಿಸಿ ಶ್ರೀಪತಿಯ ಧ್ಯಾನಿಸಿ ।
ಸುಪಥ ದೋರುವ ಕರುಣಿ ಉಪೇಂದ್ರತೀರ್ಥರ ೨೨

ಗುರುಕರುಣ ಬಲದಲಿ ಗುರುಗುಣಸ್ತವನಿಸಿ ।
ಗುರು ಪೂಜ್ಯ ರೆನಿಸಿದ ಗುರುವಾದೀಂದ್ರರ ೨೩

ವಸುಧಾಧಿಪನ ಹೃದಯ ವ್ಯಾಸಪೀಠದಿ ಪಾಡ್ವ ।
ಅಸಮ ಮಹಿಮ ಗುರು ವಸುಧೇಂದ್ರತೀರ್ಥರ ೨೪

ಹರಿದಾಸರನು ಪೊರೆದು ಪರವಾದಿಯ ತರಿದು ।
ಪುರಹರ ತಾತನ ಪ್ರಿಯ ವರದೇಂದ್ರರ ೨೫

ಮನ್ಯು ಸೂಕ್ತನ ವಲಿಸಿ ಅನ್ಯವಾದಿಯ ಜೈಸಿ ।
ಮಾನ್ಯ ರೆನಿಸಿದ ಮುನಿ ದಿರೇಂದ್ರ ತೀರ್ಥರ ೨೬

ಭುವನದೊಳಗೆ ಗುರು ಪವನ ಮತ ಸಾರಿ ।
ದೇವ ದೇವನ ಕಂಡ ಭುವನೇಂದ್ರ ತೀರ್ಥರ ೨೭

ಅಬ್ಧಿ ಶಯನನ ಪಾದಾಬ್ಜವ ಧ್ಯಾನಿಸುತ ।
ವಿಭುಧ ರೆನಿಸಿದ ಗುರು ಸುಭೋದೇಂದ್ರ ತೀರ್ಥರ ೨೮

ಅಜಪಿತರಾಮನ ನಿಜಪದ ಧ್ಯಾನಿಸಿ ।
ಸುಜನರುದ್ಧರಿಸುವ ಸುಜನೇಂದ್ರತೀರ್ಥರ ೨೯

ಸರುವ ಮೂಲಸುಧಾ ಸಾರಾರ್ಥ ಧ್ಯಾನಿಸುವ ।
ಸಿರಿ ವರ ಪ್ರಿಯ ಗುರು ಸುಜ್ಞಾನೇಂದ್ರಾರ್ಯರ ೩೦

ಸುಧೆಯ ಸವಿದು ಸದ್ಬೋಧವ ಗೈಯುತ
ಸಾಧು ಎನಿಸಿದ ಗುರು ಸುಧರ್ಮೇಂದ್ರತೀರ್ಥರ ೩೧

ಗುಣ ಪರಿ ಪೂರ್ಣವ ಪೂರ್ಣಪ್ರಜ್ಞರ ಪಥದಿ ।
ಗುಣಿಸಿ ನಲಿಸಿದ ಗುರು ಸುಗುಣೇಂದ್ರ ತೀರ್ಥಕ ೩೨

ಅಪ್ರಮೇಯ ನೊಲಿಸೋಸುಪಥವ ಧ್ಯಾನಿಸಿ ।
ಸುಪಥ ದೋರಿದ ಗುರು ಸುಪ್ರಜ್ಞೇಂದ್ರ ಮುನಿಯ ೩೩

ಸಕಲ ಶಾಸ್ತ್ರ ನಿಧಿ ಲಕುಮೀಶನ ಸ್ಮರಿಸಿ ।
ಮುಕ್ತಿ ಪಥವ ತೋರ್ದ ಸುಕೃತೀಂದ್ರತೀರ್ಥರ ೩೪

ಶಶಿಧರ ವಂದ್ಯ ಶ್ರೀ ಹಸನ್ಮುಖಿರಾಮನ ।
ನಿಶಿ ಹಗಲರ್ಚಿಪ ಸುಶೀಲೇಂದ್ರ ತೀರ್ಥರ ೩೫

ಅವನಿಪತಿಯ ಪೂಜಾ ಸ್ತವನದ್ಯರ್ಚಿಸಿ ।
ಪವನ ಸುಧೆಯ ಸಾರ್ವ ಸುವ್ರತೀಂದ್ರಾರ್ಯರ ೩೬

ವಾಯುಮತದಿ ಜ್ಞೇಯ ನಾರಸಿಂಹಧೊರಿಯ ।
ಧ್ಯೇಯ ನೆಂದರ್ಚಿಸಿದ ಸುಮತೀಂದ್ರತೀರ್ಥರ ೩೭

ರಾಘವೇಂದ್ರರ ಕರುಣ ಭಾಗ್ಯವ ಪಡೆಯುತ ।
ರಘುಪತಿನೊಲಿಸಿದ ಯೋಗಿ ಸುಜಯೀಂದ್ರರ ೩೮

ಗುರು ಸುಜಯೀಂದ್ರರ ವರ ಪುತ್ರರೆನಿಸುತ ।
ಬರುವ ಭಕ್ತರ ಪೊರೆವ ಗುರು ಸುಶಮೀಂದ್ರರ ೩೯

ಗುರು ಪರಂಪರೆ ಫಣಿಸೆ ಗುರು ಪತಿ ಜಗದ್ಗುರು ।
ಧೀರವಿಠ್ಠಲವೊಲಿದು ಪುರುಷಾರ್ಥ ಕರುಣಿಪ ೪೦



# ೧. ಶ್ರೀ ವಿಬುಧೇಂದ್ರತೀರ್ಥರು

(೧೪೩೫-೧೪೯೦)

ಶ್ರೀಮನ್ಮಧ್ವಾಚಾರ್ಯ ಪ್ರಣೀತ ಮಹಾಸಂಸ್ಥಾನದಲ್ಲಿ ಆಳಿದ ಶ್ರೀ ರಾಮಚಂದ್ರತೀರ್ಥರು ತಮ್ಮ ಇಳಿ ವಯದಲ್ಲಿ ರಘುನಾಥಭಟ್ಟ ಎನ್ನುವವರಿಗೆ ಸನ್ಯಾಸ ದೀಕ್ಷೆಯನ್ನು ಕೊಟ್ಟು, ಅವರಿಗೆ ಶ್ರೀ ವಿಬುಧೇಂದ್ರರೆಂಬ ಅಭಿಧಾನ ಇತ್ತರು. ಹೀಗೆ ಆಯ್ದುಕೊಂಡದ್ದಕ್ಕೆ ಅವರ ಮಹಾ ಮೇಧಾವಿತ್ವವೇ ಕಾರಣವಾಗಿದ್ದಿತು. ಶ್ರೀ ರಾಮಚಂದ್ರತೀರ್ಥರ ಆರೋಗ್ಯ ಚೆನ್ನಾಗಿಯೆ ಇದ್ದಿತಾದ್ದರಿಂದ ವಿಬುಧೇಂದ್ರರು ಉತ್ತರ ಭಾರತದತ್ತ ದಿಗ್ವಿಜಯ ಕೈಕೊಂಡರು. ಅಲ್ಲಿ ದ್ವೈತಸಿದ್ಧಾಂತವು ಅಷ್ಟೊಂದು ನೆಲೆಗೊಂಡಿರದ ಕಾಲವದು. ಆದ್ದರಿಂದ ಕಾಶಿ ಮುಂತಾದ ಸ್ಥಳಗಳಲ್ಲಿ ಅನ್ಯ ಮತದವರನ್ನು ವಾದದಲ್ಲಿ ಸೋಲಿಸುತ್ತ ದ್ವೈತದುಂದುಭಿಯನ್ನು ಮೊಳಗಿಸುತ್ತ ನಡೆದರು. ಎಲ್ಲೆಲ್ಲಿಯೋ ಸಂಚಾರ; ಹಾಗಾಗಿ ಶ್ರೀ ರಾಮಚಂದ್ರತೀರ್ಥರು ತಮ್ಮ ಅಂತ್ಯಕಾಲದಲ್ಲಿ ಹೇಳಿ ಕಳಿಸಿದಾಗ, ಸಿದ್ಧಾಂತ ಪ್ರಸಾರದ ಭರಭರಾಟೆಯಲ್ಲಿದ್ದ ಅವರಿಗೆ ಆ ಸಂದೇಶ ತಲುಪಲೆ ಇಲ್ಲ. ಇನ್ನೇನು ಮಾಡುವುದು?

ಪ್ರಾಣಾರ್ಪಣಕ್ಕೆ ಮುಂಚೆ ಊರಿನ ಹಿರಿಯರಿಗೆ ಸಂಸ್ಥಾನವನ್ನು ಒಪ್ಪಿಸಿದರು. ಮತ್ತು ಪೂಜಾ ಪ್ರತಿಮೆಗಳನ್ನು ನೆಲದಲ್ಲಿ ಹೂಳಿ ಇಟ್ಟರು. ಈ ಕಾಲಕ್ಕೆ ವಿದ್ಯಾನಿಧಿತೀರ್ಥ ನಾಮಕ ಯತಿಗಳು ಬಂದು ಆ ಮೂರ್ತಿಗಳನ್ನು ಹೊರತೆಗೆದು ಕೆಲ ದಿನ ಪೂಜೆ ಮಾಡಿದ ಮೇಲೆ ತಮ್ಮ ವಶಕ್ಕೇ ಇಟ್ಟುಕೊಂಡು ಹೊರಟು ಹೋದರಂತೆ. ಶ್ರೀ ವಿಬುಧೇಂದ್ರರು ಮರಳಿ ಬಂದ ಮೇಲೆ ತಮ್ಮ ಮಠ ಪರಂಪರೆಯನ್ನು ಮುಂದುವರಿಸಿದರು. ಇದುವೆ ಆ ಮುಂದೆ ಮಂತ್ರಾಲಯ ಮಠವೆಂದು ಖ್ಯಾತಿಗೊಂಡಿತು.

ಶ್ರೀಗಳವರು ನರಸಿಂಹೋಪಾಸಕರು. ಅಹೋಬಲಕ್ಕೆ ಹೋಗಿ ಅಖಂಡ ಸೇವೆಗೈದರು. ಅದರ ಫಲವೆಂಬಂತೆ ಅಲ್ಲಿಯ ನದಿಯಲ್ಲಿ ಅವನ ಮೂರ್ತಿಯೊಂದು ದೊರಕಿತು. ಅಂಥಿಂಥದಲ್ಲ; ಷೋಡಶಬಾಹುವಿನ ನರಸಿಂಹದೇವರದು. ಆ ಮೂರ್ತಿಯು ಮಂತ್ರಾಲಯ ಮಠದಲ್ಲಿ ಈಗಲೂ ಇದ್ದು, ಆ ಮೂರ್ತಿಗೆ ನರಸಿಂಹ ಜಯಂತಿಯ ದಿನ ವಿಶೇಷ ಪೂಜೆ ಸಲ್ಲುತ್ತದೆ.

ಶ್ರೀ ವಿಬುಧೇಂದ್ರರ ವಿದ್ವತ್ಕೀರ್ತಿ ಎಲ್ಲೆಡೆಗೆ ಹಬ್ಬಿತ್ತಾದ್ದರಿಂದ, ಅವರಲ್ಲಿ ವಿದ್ಯಾಭ್ಯಾಸ ಮಾಡಬೇಕೆಂದು ನಾನಾ ಕಡೆಗಳಿಂದ ವಿದ್ಯಾರ್ಥಿಗಳು ಬರತೊಡಗಿದರು. ಹಾಗೆ ಬಂದವರಲ್ಲಿ

ಲಕ್ಷ್ಮೀನಾರಾಯಣತೀರ್ಥರೆಂಬ ತರುಣ ಯತಿಗಳೂ ಇದ್ದರು. ಅವರ ಕುಶಾಗ್ರಬುದ್ಧಿ ವಾಕ್ಪಟುತ್ವ ಹಾಗೂ ಸುಸ್ವಭಾವ ಶ್ರೀಗಳವರಿಗೆ ತುಂಬಾ ಮೆಚ್ಚಿಕೆಯಾಗಿದ್ದಿತು. ಆ ಸಮಯದಲ್ಲಿ ಉತ್ತರಾದಿಮಠದ ಶ್ರೀ ರಘುನಾಥತೀರ್ಥರ ಹಾಗೂ ಶ್ರೀ ವಿಬುಧೇಂದ್ರರ ಸಮಾಗಮವಾಯಿತು. ಇಬ್ಬರದೂ ಪ್ರತ್ಯೇಕ ಮಠಗಳ ಪರಂಪರೆಯಾಗಿದ್ದರೂ ಪರಸ್ಪರರಲ್ಲಿಯ ಅನ್ಯೋನ್ಯತೆ ಗಾಢವಾಗಿದ್ದಿತೆಂಬುದನ್ನು ಗಮನಿಸತಕ್ಕುದು. ತಾವು ವಿದ್ಯಾಭ್ಯಾಸ ಮಾಡಿಸಿದ ಶಿಷ್ಯರಲ್ಲಿ ಈ ಲಕ್ಷ್ಮೀನಾರಾಯಣತೀರ್ಥರ ಪಾಂಡಿತ್ಯ ವೈಭವವನ್ನು ಶ್ರೀ ರಘುನಾಥತೀರ್ಥರೆದುರು ಪ್ರದರ್ಶಿಸಬೇಕೆಂದು ಶ್ರೀ ವಿಬುಧೇಂದ್ರರು ಅಪೇಕ್ಷೆ ಪಟ್ಟರು. ಹಾಗೆ ನಡೆದ ವಾಕ್ಯಾರ್ಥ ಮುಂತಾದ್ದರಲ್ಲಿ ಶ್ರೀ ಲಕ್ಷ್ಮೀನಾರಾಯಣರಿಗೆ ಉತ್ತರಾದಿ ಮಠಾಧೀಶರಿಂದ "ಶ್ರೀಪಾದರಾಜ" ಎಂಬ ಮನ್ನಣೆ ಸಂದಿತು. ಮುಂದೆ ಅದೇ ಹೆಸರು ಪ್ರಚುರದಲ್ಲಿ ಬಂದು ಶ್ರೀಪಾದರಾಜರು ಮಹಾಮಹಿಮರೆನಿಸಿದರೆಂಬುದು ತಿಳಿದ ವಿಷಯ. ಇಂಥ ಮಹಾನ್ ವ್ಯಕ್ತಿಗೆ ನಮ್ಮ ಶ್ರೀ ವಿಬುಧೇಂದ್ರರು ವಿದ್ಯಾಗುರುಗಳಾಗಿದ್ದುದು ಅಭಿಮಾನಪುರಸ್ಸರವಾದುದು.

ಮುಂದೆ ಶ್ರೀ ವಿಬುಧೇಂದ್ರರು ಸಂಚಾರತ್ವೇನ ಉತ್ತರದ ಮಂಚಾಲೆಗೆ ಬಂದರು. ಆ ಸ್ಥಳದ ಪೌರಾಣಿಕ ಐತಿಹ್ಯದ ಬಗ್ಗೆ ಸ್ಪಷ್ಟವಾಗಿದ್ದಿತಂತೆ. ಅಂತೂ ಶ್ರೀಗಳವರು ಆ ಊರನ್ನು ವಿಜಯನಗರದ ರಾಜರಿಂದ ಉಂಬಳಿಯಾಗಿ ಪಡೆದರು. ಅದುವೆ ಈಗಿನ ಮಂತ್ರಾಲಯ. ಹೀಗೆ ಅವರ ಕಾಲದಿಂದಲೇ ಅದು ಬೆಳಕಿಗೆ ಬಂದಿತ್ತೆನ್ನಬಹುದು.

ತಮ್ಮ ಇಳಿವಯದಲ್ಲಿ ಶ್ರೀ ವಿಬುಧೇಂದ್ರರು ಆರಂಭ ಕಾಲದಿಂದ ವಿದ್ಯಾಭ್ಯಾಸ ಮಾಡಿಸಿ ಮುಂದೆ ತಂದಿದ್ದ ಅನಂತಪ್ಪ ಎನ್ನುವವರಿಗೆ ಆಶ್ರಮವಿತ್ತರು. ಆ ಮುಂದೆ ದಕ್ಷಿಣದ ತಾಮ್ರಪರ್ಣಿಯ ನೆರೆಯಲ್ಲಿದ್ದಾಗ ತಿನ್ನವೇಲಿಯಲ್ಲಿ ಹರಿಪದವನ್ನು ಸೇರಿದರು. ( ಮಾರ್ಗಶೀರ್ಷ ಶುದ್ಧ ನವಮಿ )

ಅವರನ್ನು ಕುರಿತು ಒಂದು ಕೀರ್ತನೆಯನ್ನು ಇಲ್ಲಿ ಕೊಡಮಾಡಿದೆ.



## ೩

[ಧಾಟಿ: ಆವ ರೀತಿಯಿಂದ ನೀ ಎನ್ನ ಸಲಹುವಿ]

ತಿರುನಲ್ವೇಲಿ ಮೆರೆವ ಶ್ರೀ ವಿಬುಧೇಂದ್ರರ
ಚರಣ ಭಜಿಸೊ ನಿರುತಾ ಪ.
ಹರಿ ಕೊಡೆ ಸ್ವಪ್ನ ಅಲ್ಲಿ ಶಿರಿ ಅಹೋಬಲ ತೀರ್ಥದಿ
ವರ ಷೋಡಶಬಾಹು ನರಹರಿಯ ತಂದಾ ಅ. ಪ.

ಶ್ರೀ ರಾಮಚಂದ್ರತೀರ್ಥರ ವಾರಿಜ ಕರಜಾತ
ಧಾರುಣಿಯೊಳು ಖ್ಯಾತ ಕೋರಿದವರಿಗೆರೆವಾತ
ನೀರಜಾಸನ ಪೂಜಿತ ಶ್ರೀರಾಮಚಂದ್ರನ್ನ
ಆರಾಧಿಸಿ ಧ್ಯಾನಿಸಿ ಕೀರುತಿ ಪಡೆದಂಥಾ ೧

ಉತ್ತಿ ಬಿತ್ತುವ ಕೃಷಿಲಿ ನಿತ್ಯ ಉಪನೀತವ
ಎತ್ತಿ ಗೂಟಕೆ ಹಾಕುವ ಜಿತ್ತಪ್ಪ ನಾಮಕನಾ
ಹತ್ತಿರ ಕರದೀಯೆ ಸ್ತಂಭೋದ್ಭವ ಜಲಜಕ್ಕೆ
ಮೆತ್ತಗುಣಿಸೆ ಈತನ ಜಿತಾಮಿತ್ರ ಯತಿಯ ಗೈದಾ ೨

ಆಕೇರಲಾಸೇತು ಆಗಂಗಾಹಿಮಾಲಯಕು
ತಾಕಿ ದುರ್ವಾದಿಗಳ ಜಯಿಸಿದ ಜಯಪತ್ರವಾ
ಲಕುಮೀಶ ನರಹರಿಗೆ ನಿತ್ಯವು ಅರ್ಪಿಸಿ
ತಾ ಕರುಣೆಯ ಪಡೆದು ದ್ವೈತ ಧ್ವಜ ಹಾರಿಸಿದಾ ೩

■ ■ ■

# ೨. ಶ್ರೀ ಜಿತಾಮಿತ್ರತೀರ್ಥರು

(೧೪೯೦-೧೪೯೨)

ವಿಚಿತ್ರ - ಅದ್ಭುತ - ಅತ್ಯಾಶ್ಚರ್ಯ! ಈ ವಿಶೇಷಣಗಳಲ್ಲಿ ಯಾವುದೂ ಆದೀತು, ಅಂಥದೊಂದು ಪ್ರಸಂಗ ನಡೆದು ಹೋಯಿತು. ಮುಗ್ಧ, ಪೆದ್ದ ಎನಿಸಿದ್ದ ಒಬ್ಬ ಹುಡುಗ ಮಂತ್ರಾಲಯ ಮಠದ ಯತಿಶ್ರೇಷ್ಠನೆನಿಸಿದ. ಅನಂತ ಎಂಬ ಹೆಸರಿನ ಆತ ಕಡು ಬಡತನದಲ್ಲಿ ಅಕ್ಕನ ಆಸರೆಯಲ್ಲಿ ಬೆಳೆದ. ಎಂಟನೆಯ ವರ್ಷಕ್ಕೆ ಉಪನಯನ ಜರುಗಿತು. ಕೊರಳಲ್ಲಿ ಜನಿವಾರವೂ ಬಂದಿತು. "ಓಹೋ! ಊಟ ಮಾಡುವ ಕಾಲಕ್ಕೆ ಇದನ್ನು ಹಾಕಿಕೊಳ್ಳಬೇಕು" ಎಂದುಕೊಂಡ; ಉಳಿದೆಲ್ಲ ಸಮಯ ಅದು ಗೂಟದಲ್ಲಿ ನೇತಾಡುತ್ತಿತ್ತು!

ಇಂಥ ಅಜ್ಞಾನ ಶಿಖಾಮಣಿಯನ್ನು, ಅವನ ಅಕ್ಕ, ಶ್ರೀ ವಿಬುಧೇಂದ್ರರು ತಮ್ಮ ಊರಿಗೆ ಬಂದಾಗ ಕರೆದೊಯ್ದಳು. ಅವನ ತಿಳಿಗೇಡಿತನವನ್ನು ದುಃಖಿಸುತ್ತ ವಿವರಿಸಿದಳು. ಹರಿದಾಸರ ಒಂದು ಹಾಡಿನಲ್ಲಿ ಈಯೊಂದು ಘಟನೆ ಬರುತ್ತದೆ. ಅದೆಂದರೆ ಈತ ಒಮ್ಮೆ ಮನೆಯವರ ಹೇಳಿಕೆಯ ಮೇರೆಗೆ ದೇವರಿಗೆ ನೈವೇದ್ಯ ತೋರಿಸಿದ. ನೈವೇದ್ಯ ತಟ್ಟೆಯಲ್ಲಿರಲಿಲ್ಲ. ಏನಾಯಿತೆಂದು ಕೇಳಿದಾಗ ದೇವರು ಅದನ್ನೆಲ್ಲ ಉಂಡನೆಂದು ಹೇಳಿದನಂತೆ!

ಇದೆಲ್ಲ ಪರಿಯನ್ನು ಕೇಳಿ ಶ್ರೀಗಳವರು ಅನಂತಪ್ಪನ ಕಡೆಗೆ ನೋಡಿದರು. ಅವನಲ್ಲಿ ಅಲೌಕಿಕ ಚೇತನವಿರುವುದನ್ನು ಮನಗಂಡರು. ದೇವರಿಗೆ ಊಟ ಮಾಡಿಸುವನೆ? 'ಹರಿಗುಣಿಸು ನೋಡ್ವೆನೆಂದು ಭರದಿತ್ತ ಆಜ್ಞೆಗೆ ಸಾಲಿಗ್ರಾಮುಣದಿರೆ ಹರಣಕ್ಕೆ ಗುಂಡೆತ್ತೆ ಹರಿ ಉಣ್ಣೆ; ತೋರಿದರ' ಎಂಬ ಐತಿಹ್ಯವೂ ಒಂದು ಹಾಡಿನಲ್ಲಿ ಬಂದಿದೆ; ಅದೇನೆ ಇರಲಿ ಶ್ರೀ ವಿಬುಧೇಂದ್ರರು ಅವನನ್ನು ಮಠಕ್ಕೆ ಕರೆದೊಯ್ದರು. ಅಲ್ಲಿ ಅವನ ಜೀವನ ಕ್ರಮವೇ ಬದಲಾಯಿತು. ಕೆಲವೇ ವರ್ಷಗಳಲ್ಲಿ ಅವರು ಮಹಾ ವಿದ್ವಾಂಸರಾದದ್ದೇ ಅತ್ಯಾಶ್ಚರ್ಯದ ಸಂಗತಿ. ಶ್ರೀಗಳು ಅವರಿಗೆ ಸನ್ಯಾಸ ದೀಕ್ಷೆಯಿತ್ತರು. ಕೊಟ್ಟ ಹೆಸರು ಜಿತಾಮಿತ್ರ. (ವೈರಿಗಳನ್ನು ಗೆದ್ದವ ಎಂಬ ಅರ್ಥ. ಇದೊಂದು ಅಪೂರ್ವ ಪದಪ್ರಯೋಗ; ಗ್ರಂಥಗಳಲ್ಲಿ ಇದರ ಬಳಕೆ ಇಲ್ಲ ಎಂದು ಮೊನಿಯರ್-ವಿಲಿಯಮ್ಸನ ಸಂಸ್ಕೃತ ಕೋಶದಲ್ಲಿ ಕಾಣಿಸಲಾಗಿದೆ.)

ಜಿತಾಮಿತ್ರತೀರ್ಥರು ಪೀಠಸ್ಥರಾಗಿದ್ದುದು ಇಳಿವಯದಲ್ಲಿ ಕೆಲವೇ ವರ್ಷಗಳಾದರೂ ಆ ಮುಂಚೆ ತುಂಬಾ ಸಲ ಸಂಚರಿಸಿ ವಾದಿಗಳನ್ನು ಜಯಿಸಿರಲು ಸಾಕು. ಆದರೆ ವಿವರಗಳು ದೊರೆತಿಲ್ಲ. ಅವರ ಕೊನೆಗಾಲದ ಕುರಿತ ಒಂದು ಪ್ರಸಂಗ ಮಾತ್ರ ಇಂದಿಗೂ ಪ್ರಚಲಿತವಿದೆ.

ಶ್ರೀಗಳವರು 'ಗೋಸದ' ಮರದ ಅಡಿಯಲ್ಲಿ (ಆಲದ ಮರ) ಶಿಷ್ಯರ ಸಮ್ಮುಖದಲ್ಲಿ ಪಾಠಪ್ರವಚನ ನಡೆಸಿದ್ದಾರೆ. ಅದು ಕೃಷ್ಣಾ-ಭೀಮಾ ಸಂಗಮದ ಸೆರೆಯ ಸ್ಥಳ. ಒಮ್ಮೆಂದೊಮ್ಮೆಲೆ ಕೃಷ್ಣಾ ನದಿಗೆ ಎಂದಿಲ್ಲದ ಮಹಾಪೂರ ಬಂದಿತು. ಶಿಷ್ಯರೆಲ್ಲ ಗಡಬಡಿಸಿ ಎದ್ದು ಓಡಿಹೋಗಲು ತೊಡಗಿದ್ದರೆ, ಇವರು ಮಾತ್ರ ಕಣ್ಣು ಮುಚ್ಚಿ ಮೌನದಿಂದ ಅಲ್ಲೇ ಕುಳಿತಿದ್ದಾರೆ! ಒಂದು ವಾರ ಕಳೆದ ಮೇಲೆ ಮಹಾಪೂರ ಇಳಿಯಿತಂತೆ. ಶಿಷ್ಯರು ಗುರುಗಳನ್ನು ಎಲ್ಲಿಯೂ ಕಾಣದೆ ಪೇಚಾಡಿದರು. ಆಗ ಆ ಮರದಿಂದ ಅಶರೀರವಾಣಿ ಕೇಳಿಸಿತಂತೆ, 'ನಾನು ಇಲ್ಲಿಯೇ ಇದ್ದೇನೆ', ಎಂದು.

ಹೀಗಾಗಿ ಅವರಿಗೆ ಸಕೃತ್ ವೃಂದಾವನವಿಲ್ಲದೆ ಹೋಯಿತು. 'ಭೂರುಹಯತಿ' ಎನಿಸಿಕೊಂಡರು. ಆ ವೃಕ್ಷಕ್ಕೇನೆ ಪ್ರತಿವರ್ಷ ಆರಾಧನೆ ನಡೆಯುತ್ತದೆ. ಬಾಲ್ಯದಲ್ಲಿ ಹೇಗೋ ಅಂತ್ಯಕಾಲದಲ್ಲಿಯೂ ಅವರದು ಅಭೂತಪೂರ್ವ ವೃತ್ತಿಯಾಯಿತು.

ಈ ಘಟನೆಯನ್ನು ಎಂಥ ವಿಚಾರವಾದಿಗಳೂ ಒಪ್ಪಬೇಕಾದೀತು. ಏಕೆಂದರೆ ತುಸುಮಟ್ಟಿಗೆ ಸಮಕಾಲೀನರೇ ಆದ ಶ್ರೀಪಾದರಾಜರಂತಹ ಮಹಾನ್ ಯತಿಗಳೇ ಅವರನ್ನು ಸ್ತುತಿಸಿರುವುದರಿಂದ ಶ್ರೀ ಜಿತಾಮಿತ್ರರ ಮಹಿಮೆ ಎಂಥದೆಂಬುದು ವೇದ್ಯವಾಗುತ್ತದೆ. ಕಾಲ ಗತಿಸಿದಂತೆ ಅತಿಶಯೋಕ್ತಿಯಿಂದ ಕೂಡಿದ ಐತಿಹ್ಯವೇನೂ ಅಲ್ಲ.

ಶ್ರೀ ಜಿತಾಮಿತ್ರ ಯತಿಗಳು ಪೀಠವನ್ನಲಂಕರಿಸಿದ್ದು ಕೇವಲ ೨-೩ ವರ್ಷ ಮಾತ್ರ. ಆದರೂ ಧ್ರುವನಕ್ಷತ್ರದಂತೆ ದೇದೀಪ್ಯರೆನಿಸಿದ್ದಾರೆ. ಅವರನ್ನು 'ರುದ್ರವಂದ್ಯ ಮೂರುತಿ' ಎಂದು ದಾಸರು ವರ್ಣಿಸಿದ್ದರಲ್ಲಿ ಅವರು ರುದ್ರಾಂಶರೆಂದು ತಿಳಿಯಬಹುದೆ? ಆದರೆ ಈ ವಿಶೇಷಣದ ಮುಂದೆ 'ರಂಗವಿಠಲ' ಎಂಬುದು ಬರುತ್ತದೆಯಾದ್ದರಿಂದ ರುದ್ರನಿಂದ ವಂದಿತನಾದ ಶ್ರೀಹರಿ ಎನ್ನಬೇಕೆಂದು ತೋರುತ್ತದೆ. ಸುಮಾರು ೮೦ ವರ್ಷಗಳ ಹಿಂದೆ ಶ್ರೀ ಸುಶೀಲೇಂದ್ರರು ಸಂಗಮೇಶ್ವರ ದೇವಾಲಯದಲ್ಲಿ, ಹತ್ತಿರದ ಓರ್ವ ಬೈರಾಗಿ ಅಸ್ಪಷ್ಟವಾಗಿ ಕಾಣಿಸಿಕೊಂಡು ಲಿಂಗವಿರುವ ಗರ್ಭಗುಡಿಯಲ್ಲಿ ಅದೃಶ್ಯನಾದನಂತೆ. ಜಿತಾಮಿತ್ರರೇ ಶ್ರೀ ಸುಶೀಲೇಂದ್ರರಿಗೆ ಹೀಗೆ ದರ್ಶನವಿತ್ತಿರಬೇಕೆಂದು ನಂಬಲಾಗುತ್ತದೆ. ಅವರ ಆರಾಧನೆಯನ್ನು ಮಾರ್ಗಶೀರ್ಷ ಅಮಾವಾಸ್ಯೆಯಂದು ಆಚರಿಸಲಾಗುತ್ತದೆ.

## ೪

**[ರಾಗ : ಭೈರವಿ    ತಾಳ : ರೂಪಕ ]**

**ವಂದನೆ ಮಾಡಿರೈ ಯತಿಕುಲಚಂದ್ರನ ಪಾಡಿರೈ** ಪ.

ಬಂದ ದುರಿತಗಳ ಹಿಂದೆ ಕಳೆದು ಆ-
ನಂದಪಡುವ ವಿಬುಧೇಂದ್ರಕರೋದ್ಭವರ ಅ.ಪ.

ರಘುಕುಲವರಪುತ್ರ ರಾಮನ ಚರಣ ಕರುಣಾಪಾತ್ರ
ನಿಗಮೋಕ್ತಿಯ ಸೂತ್ರಪಾಠವ ಪಠಿಸುವ
ಸುಗುಣ ಜಿತಾಮಿತ್ರ ನಗಧರ ಪನ್ನಗಶಯನನ ಗುಣ
ಪೊಗಳುವ ಅಪಾರ ಅಗಣಿತ ಮಹಿಮರ ೧

ವರಮಹಾತ್ಮೆ ಮೊದಲಿಂದೀ ಪರಿಯಂದದಿ
ಚರಿಸಿ ನಿರುತ ಮನವ ನಿಲಿಸಿ ಶ್ರೀಹರಿ ಕರಿ-
ವರದನ ಒಲಿಸಿದರೆ ಜನರಿಗೆ ಅರಿಯದೆ ಮರೆಯಾಗುತ
ಹರುಷದಿ ಗೋನದತರುವಲ್ಲಿರುವರ ೨

ಮುದದಿ ಕೃಷ್ಣಾತಟಿಯ ಮಧ್ಯದಿ ಸದನದ ಪರಿಯ
ಸದಮಲ ಯತಿವರ್ಯ ತಪಮೌನದ [ಲಿದ್ದುದನರಿಯ]
ಒದಗಿ ನದಿಯು ಸೂಸುತ ಬರಲೇಳು ದಿನ-
ಕುದಯಾದವರ ಸುಪದ ಕಮಲಂಗಳ ೩

ಮಾಸ ಮಾರ್ಗಶೀರ್ಷಾರಾಧನೆಗಶೇಷ ದಿನ ಅಮಾ-
ವಾಸ್ಯ ದಾಸರು ಪ್ರತಿ ವರುಷ ಮಾಳ್ಪರು
ಲೇಸೆನಲು ಶ್ರುತಿಘೋಷ ಕಾಶಿಯು ಕ್ಷೇತ್ರ ಈ ಸ್ಥಳ ಮಿಗಿಲೈ
ದಾಸರಿಗೆ ಭೂಸುರ ಪದಗಳ ೪

ಮಧ್ವಶಾಸ್ತ್ರ ಗ್ರಂಥಸಾರದ ಪದ್ಧತಿ ತಿಳಿದಂಥ
ಅದ್ವೈತಪಂಥ ಮುರಿದು ಮತ ಉದ್ಧರಿಸಿದಂಥ
ರುದ್ರವಂದ್ಯ ಮೂರುತಿ ರಂಗವಿಠಲನ ಪದ-
ಪದ್ಮಾರಾಧಕ ಪ್ರಸಿದ್ಧ ಮುನೀಂದ್ರರ ೫

■ ■ ■

೫

[ರಾಗ: ಶಂಕರಾಭರಣ; ಅಟ್ಟತಾಳ]

**ನೋಡಿದ್ಯಾ ಇವರ ಪಾದವ ಕೊಂಡಾಡಿದ್ಯಾ** ಪ.
ರೂಢಿಯೊಳು ವಿಬುಧೇಂದ್ರರ್ನೀಡಿದ ಜಲಜಕ್ಕೆ
ಮಾಡಿ ಭಕ್ತಿಯ ದಿವ್ಯ ಗಾಢದುಣಿಸಿದರ ಅ.ಪ.

ಜಿತ್ತಪ್ಪ ನಾಮದಿ ಮೆರೆದು । ಸತತ
ಸತ್ಪಥ ಗತಿಗಳ ಮರೆದು । ಭೂಮಿ
ಉತ್ತಿ ಬಿತ್ತುವ ಕೃಷಿ ಅರಿದೂ । ಈತ
ನಿತ್ಯ ಕರ್ಮಗಳೆಲ್ಲ ತೊರೆದೂ । ಆಹಾ
ನಿತ್ಯ ಸುಭೋಜನದ್ಹೊತ್ತಿಗೆ । ಗೂಟದಿ
ಸುತ್ತಿಟ್ಟ ಜನಿವಾರ ಧರಿಸಿದ ಮಹಿಮರ ೧

ವಿಬುಧೇಂದ್ರರಿವರಲ್ಲಿ ಬರುತಾ । ಇರೆ
ಸುಭಗಿನಿ ನಮಿಸ್ಪಿ ಬೇಡುತ್ತಾ । ಈತ
ಶುಭ ಪಥವನರಿಯನೆಂದಳು ತಾ । ಇರೆ
ಪ್ರಭು ನರಹರಿ ಜಲಜ ಕೊಡುತಾ । ಆಹಾ
ಕಭಲೋಕ ಪತಿ ಈತ ಅಬುಜಾಂಘ್ರಿ ಪೂಜಿಸಿ
ವಿಭವದುಣಿಸೋ ಎನ್ನೆ ಪ್ರಬಲರುಣಿಸಿದರ ೨

ಗುರು ವಿಬುಧೇಂದ್ರರು ಬಂದು । ಮತ್ತೆ
ಹರುಷದಿ ಸಂಚಾರದಂದು । ಈತನ
ಕರೆಸೆ ಹರಿ ಉಂಡನೆಂದು । ಕೇಳಿ
ಹರಿಗುಣಿಸು ನೋಡ್ವೆನೆಂದು । ಆಹಾ
ಭರದಿತ್ತ ಆಜ್ಞೆಗೆ ಸಾಲಿಗ್ರಾಮುಣದಿರೆ
ಹರಣಕ್ಕೆ ಗುಂಡೆತ್ತೆ ಹರಿ ಉಣ್ಣೆ ತೋರಿದರ ೩

ವಿಬುಧೇಂದ್ರರಾಶ್ರಮ ಕೊಡುತಾ । ಇರೆ
ಶುಭನಾಮ ಜಿತಾಮಿತ್ರರೆನುತಾ । ನಿನಗೆ
ಕಭಲೋಕಪತಿ ಒಲಿದನೆನುತಾ । ಸತತ
ಅಬುಜಾಕ್ಷನ ಭಜಿಸೆನುತಾ । ಆಹಾ
ಸಬಲ ಆಶಿಷ ಮಾಡೆ ಅಬುಜೋದ್ಭವ ಭಾವಿ
ಪ್ರಬಲ ಶಾಸ್ತ್ರವ ಭೂಮಿವಿಬುಧರಿಗೊರೆದರ ೪

ನದಿ ಕೃಷ್ಣೆಯ ಮಧ್ಯದಲ್ಲಿ । ಪಾಠ
ಬುಧರಿಗೆ ಪೇಳ್ತಿರೆ ಅಲ್ಲಿ। ಪೂರ್ಣ
ಒದಗೆ ಪ್ರವಾಹವು ಅಲ್ಲಿ । ಗುರು
ಬದಿಯ ಬಿಟ್ಟು ದಂಡೆಯಲ್ಲಿ । ಆಹಾ
ಬೆದರಿ ಶಿಷ್ಯರು ಬರೆ ಸಪ್ತಾಹ ನದಿ ಸೂಸೆ
ಮುದದಿ ಲಕುಮೀಶನ ಗೋನದಿ ಧ್ಯಾನಿಪರ ೫



# ೩. ಶ್ರೀ ರಘುನಂದನತೀರ್ಥರು

(೧೪೯೨ - ೧೫೦೪)

ಶ್ರೀ ಜಿತಾಮಿತ್ರರಿಂದ ಆಶ್ರಮ ಹೊಂದಿದ ಇವರ ಬಗ್ಗೆ ಹೆಚ್ಚಿನ ವಿಷಯ ತಿಳಿಯದಿದ್ದುದ್ದು ಬೇಸರದ ವಿಷಯ. ತಮ್ಮ ೧೨ ವರ್ಷಗಳ ಪೀಠಾಧಿಕಾರದಲ್ಲಿ ವಿಶೇಷ ಸಾಧನೆಗೈದಿರಲು ಸಾಕು. ಇಲ್ಲಿರುವ ಕೀರ್ತನೆಯಿಂದ, ಅಪರಹಣವಾದ ಮೂಲ ರಾಮದೇವರ ಮೂರ್ತಿಯನ್ನು ಮರಳಿ ದೊರಕಿಸಿದ್ದುರ ಪ್ರಸ್ತಾಪವಿದೆ. ಆ ಸಂದರ್ಭ ಹೀಗಿದೆ. ಶ್ರೀ ರಾಮಚಂದ್ರತೀರ್ಥರು ಅಸ್ತಂಗತರಾದ ಮೇಲೆ ಶ್ರೀ ವಿಬುಧೇಂದ್ರರು ಸಂಚಾರದಲ್ಲಿದ್ದಾಗ. ಮಠದ ಪೂಜಾ ಪ್ರತಿಮೆಗಳು ಕಣ್ಮರೆಯಾಗಿದ್ದುವಷ್ಟೆ. ವಿಬುಧೇಂದ್ರರು ಆ ಮೂರ್ತಿಗಳನ್ನು ಮರಳಿ ಪಡೆಯುವತ್ತ ಅದೇಕೊ ಮನಸ್ಸು ಮಾಡಿರಲಿಲ್ಲ. ಶ್ರೀ ಜಿತಾಮಿತ್ರರಂತೂ ವಿರಕ್ತ ಶಿಖಾಮಣಿಗಳು. ಆಗಿನ ದಿನಗಳಲ್ಲಿ ಇಂಥ ಬಾಬತ್ತಿನಲ್ಲಿ ಛಲವನ್ನು ತೊಡುವುದು ಸಾಧ್ಯವಿರಲಿಲ್ಲವೇನೊ.

ಶ್ರೀ ರಘುನಂದನರಿಗೆ ಮಾತ್ರ ಆ ಮೂರ್ತಿಗಳನ್ನು ಹೇಗಾದರೂ ಮರಳಿ ಪಡೆಯಬೇಕೆಂದು ತೋರಿತು. ಹೇಗೆ ಸಾಧ್ಯ? ಆ ವೇಳೆಗೆ ಬಾಡದ ಚಂದ್ರಭಟ್ಟ ಎನ್ನುವ ಮಠದ ಶಿಷ್ಯರು ಅವನ್ನು ತರುವುದಾಗಿ ಹೇಳಿದರು. ಅವನ್ನು ಒಯ್ದಿದ್ದ ವಿದ್ಯಾನಿಧಿ ಸ್ವಾಮಿಗಳು ( ಇವರು ಶಿರೂರು ಮಠದವರೆಂದು ಗುರುಚರಿತೆಯಲ್ಲಿ ಉಕ್ತವಾಗಿದೆ. ಆ ಮಠದಲ್ಲಿ ಈ ಹೆಸರಿನವರಾರೂ ಇಲ್ಲ. ) ಬಂಕಾಪುರದಲ್ಲಿ ಮುಕ್ಕಾಂ ಮಾಡಿದಾಗ, ಶ್ರೀ ರಾಮದೇವರ ಮೂರ್ತಿಯನ್ನು ಬಚ್ಚಿಟ್ಟುಕೊಂಡು, ಶ್ರೀ ರಘುನಂದನತೀರ್ಥರಿಗೆ ಒಪ್ಪಿಸಿದರಂತೆ. ಆ ಗಡಿಬಿಡಿಯಲ್ಲಿ ಚಂದ್ರಭಟ್ಟರಿಗೆ ಸೀತಾದೇವಿಯ ಪ್ರತಿಮೆಯನ್ನು ತರುವುದಾಗಲೆ ಇಲ್ಲ. ಈ ಚಂದ್ರಭಟ್ಟರಿಗೆ ದತ್ತಿ ಮುಂತಾದ ಪುರಸ್ಕಾರ ಮಾಡಿದ್ದುರ ತಾಮ್ರ ಶಾಸನವೊಂದಿದೆ.

ಕಾರ್ತೀಕ ಶುದ್ಧ ಅಷ್ಟಮಿಯಂದು ಶ್ರೀಗಳವರು ಹಂಪಿಯಲ್ಲಿ ವೃಂದಾವನಸ್ಥರಾದರು.

■ ■ ■

## ೬

[ರಾಗ: ........]

ಪಂಪಾಕ್ಷೇತ್ರದಿ ಇರುವಾ ಶ್ರೀ ರಘುನಂದನ
ಹಂಪೆಯ ತುಂಗಾತಟದೀ ಮೆರೆವಾ ಪ.
ಸಂಪದ ಪವನನ ಶಾಸ್ತ್ರದ ಜ್ಞಾನವಿತ್ತು
ತಂಪೆಸೆಯುತ ಭವ ಕಂಪನ ಓಡಿಪ ಅ.ಪ.

ಗುರು ಜಿತಾಮಿತ್ರರು ದಯದಿ ಆಶ್ರಮ ನೀಡಲು
ಹರುಷದಿಗೊಂಡರಿವರು ತ್ವರದೀ
ಪರರಪಹರಿಸಿದ ಶಿರಿ ಮೂಲರಾಮನ
ಗುರು ದಯದಲಿ ಪೊಂದಿ ನಿರುತ ಪೂಜಿಸಿದ ೧

ಅಲ್ಲಲ್ಲಿ ವಿದ್ವಜ್ಜನರ ಕರೆದೂ ಮಧ್ವಮತೀಯ
ಎಲ್ಲಾ ಜನಕೆ ದಿವ್ಯ ಬಿರುದೂ
ಸಲ್ಲಿಸಿ ದುರ್ಮತರೆಲ್ಲರ ಸೋಲಿಸಿ
ನಿಲ್ಲಿಸಿ ಮನವನು ಹರಿಧ್ಯಾನ ಗೈದಾ ೨

ಸುಖತೀರ್ಥರ ಶಾಸ್ತ್ರ ನಿತ್ಯ ಪಠಿಸಿ ಶ್ರೀ ಸುರೇಂದ್ರರಿಗೆ
ಅಖಿಲಾ ವಿಧಿಯಲ್ಲಿ ಸನ್ಯಾಸ ಸಲಿಸಿ
ಮುಕುತಿಪ್ರದಾಯಕ ಶ್ರೀ ಲಕುಮೀಶನ ।
ಸುಕರದಲೀ ಇತ್ತು ಸಕಲರ ಪೋಷಿಸೆಂದಾ ೩

■ ■ ■

# ೪. ಶ್ರೀ ಸುರೇಂದ್ರತೀರ್ಥರು

(೧೫೦೪-೧೫೭೫)

ಸುಮಾರು ಏಳು ದಶಕಗಳಿಗೂ ಮಿಕ್ಕಿ ವೇದಾಂತ ಪೀಠವನ್ನು ಅಲಂಕರಿಸಿದ್ದ ಶ್ರೀ ಸುರೇಂದ್ರಯತಿಗಳು ತರುಣ ವಯಸ್ಸಿನಲ್ಲಿಯೇ ಯತ್ಯಾಶ್ರಮವನ್ನು ಹೊಂದಿರಬೇಕು. ಇಷ್ಟು ದೀರ್ಘಾವಧಿ ಪೀಠಸ್ಥರಾದವರು ಈ ಪರಂಪರೆಯಲ್ಲಿ ಬೇರಾರೂ ಇಲ್ಲ. ತಮ್ಮ ಅವಧಿಯಲ್ಲಿ ಅವರು ಅನೇಕ ಬಗೆಯಾಗಿ ಸಾಧನೆ ಗೈದಿರಬೇಕು. ದೊರೆತ ವಿವರಗಳು ಒಟ್ಟಿನಲ್ಲಿ ಕಡಿಮೆ.  ಆದರೆ ಒಂದು ಮಾತು ನಿಜ, ಅವರ ಕಾಲದಲ್ಲಿ ಶ್ರೀಮಠದ ಖ್ಯಾತಿ ಮೇಲೇರಿತು.

ಶ್ರೀ ಸುರೇಂದ್ರರು ಹಾಗೂ ಶ್ರೀ ವ್ಯಾಸರಾಯರು ಪೂರ್ವಾಶ್ರಮದಲ್ಲಿ ಜ್ಞಾತಿ ಬಂಧುಗಳಾಗಿದ್ದವರು. ಈಗಂತೂ ಅವರ ಒಡನಾಟ ಇನ್ನಷ್ಟು ಆತ್ಮೀಯವಾಯಿತು. ಆ ನಿಮಿತ್ತದಿಂದ ಶ್ರೀ ಸುರೇಂದ್ರರು ಹಂಪಿಗೆ ಬಂದು ಅಲ್ಲಿಯ ವಿಜಯವಿಠ್ಠಲನ ದೇವಸ್ಥಾನದಲ್ಲಿ ಬಿಡಾರ ಮಾಡಿದರು. ಶ್ರೀ ವ್ಯಾಸರಾಯರ ಕಣ್ಣರಿಕೆಯಲ್ಲಿ, ಶ್ರೀ ಮೂಲರಾಮದೇವರ ಪೂಜೆ ಮಹಾಭಿಷೇಕ, ಪಂಡಿತರೊಡನೆ ಸೌಹಾರ್ದಮಯ ಚರ್ಚೆ ಮುಂತಾದ ಕಾರ್ಯಕ್ರಮಗಳು ಜರುಗತೊಡಗಿದವು. ವಿಜಯನಗರದ ಆಗಿನ ರಾಜನಾದ ರಾಮರಾಯನು (ಅಳಿಯ ರಾಮರಾಯನ ಅಜ್ಜ) ತನ್ನ ಸೇವೆ ಸಲ್ಲಿಸಿದನಲ್ಲದೆ, ಹಲವು ಗ್ರಾಮಗಳನ್ನೂ ಉಂಬಳಿಯಾಗಿ ಧಾರೆಯೆರೆದನು. ಮುಂದೆ ಕೃಷ್ಣದೇವರಾಯನು ರಾಜ್ಯಾಡಳಿತವನ್ನು ವಹಿಸಿಕೊಂಡ ಮೇಲೆ ಶ್ರೀ ಸುರೇಂದ್ರರನ್ನು ಬರಮಾಡಿಕೊಂಡು, ವಿವಿಧ ಬಗೆಯಲ್ಲಿ ಸತ್ಕರಿಸಿದನು. ಈ ಬಾರಿ ಶ್ರೀ ಸುರೇಂದ್ರರು ಶ್ರೀ ವ್ಯಾಸರಾಯರ ನಿಮಿತ್ತದಿಂದ ಹೆಚ್ಚು ಕಾಲ ಹಂಪೆಯಲ್ಲಿ ಉಳಿದರು.

ಶ್ರೀ ವ್ಯಾಸರಾಯರಲ್ಲಿ ವಿಷ್ಣುತೀರ್ಥರೆಂಬ ಯತಿಗಳಿದ್ದರು. ತರುಣ ವಯಸ್ಸು; ಆಗಲೇ ಸಚ್ಛಾಸ್ತ್ರದಲ್ಲಿ ಪರಿಣತಿ; ಜೊತೆಗೆ ವಾಗ್ವೈಭವ. ಶ್ರೀ ಸುರೇಂದ್ರರಿಗೆ ತಕ್ಷಣ ಆಕರ್ಷಣೆಯುಂಟಾಯಿತು. ಸಮಯ ನೋಡಿಕೊಂಡು ಆಪ್ತವಾಗಿ ವ್ಯಾಸರಾಯರನ್ನುದ್ದೇಶಿಸಿ "ನಿಮ್ಮಿಂದ ಒಂದು ಭಿಕ್ಷೆಯನ್ನು ಅಪೇಕ್ಷಿಸಿದ್ದೇನೆ." ಎಂಬ ಪೀಠಿಕೆ ಹಾಕಿ ಶ್ರೀ ವಿಷ್ಣುತೀರ್ಥರನ್ನು ತಮ್ಮ ಮಠಕ್ಕೆ ಬಿಟ್ಟುಕೊಡಬೇಕೆಂದು ಕೇಳಿದರು. ಅಪ್ರತಿಮನಾದ ನೆಚ್ಚಿನ ಶಿಷ್ಯ, ಈ ವಿಷ್ಣುತೀರ್ಥರು. ಆದಾಗ್ಯೂ ಶ್ರೀ ವ್ಯಾಸರಾಯರು ವಿಷ್ಣುತೀರ್ಥರ ಹಸ್ತವನ್ನು ಶ್ರೀ ಸುರೇಂದ್ರರ

ಕೈಯಲ್ಲಿರಿಸಿ "ಕೃಷ್ಣಾರ್ಪಣ" ಹೇಳಿಬಿಟ್ಟರು.* ಆಗ ಸುರೇಂದ್ರರು ಆ ಹದಿವಯದ ಯತಿಗೆ ದಂಡಪಲ್ಲಟ ಮಾಡಿಸಿ 'ವಿಜಯೀಂದ್ರ'ರೆಂದು ನಾಮಕರಣ ಮಾಡಿದರು. ತಮಗೆ ವಯಸ್ಸಾದಂತೆಲ್ಲ ಅವರನ್ನೇ ದಿಗ್ವಿಜಯ, ವಾದಿನಿಗ್ರಹ ಕಾರ್ಯಗಳಿಗೆಂದು ಕಳಿಸತೊಡಗಿದರು. ಹೀಗಾಗಿ ತಮ್ಮ ಎಳೆಯ ವಯಸ್ಸಿನಲ್ಲಿ ಪೀಠಾಧಿಪತಿಗಳಾಗುವುದಕ್ಕೆ ಮುಂಚೆಯೆ ಶ್ರೀ ವಿಜಯೀಂದ್ರರು ವಿಖ್ಯಾತರೆನಿಸಿದ್ದರು.

ಶ್ರೀ ಸುರೇಂದ್ರರ ಬಗ್ಗೆ ತಿಳಿದ ಇನ್ನೆರಡು ಅಂಶಗಳೆಂದರೆ ಅವರು ಮೂರು ಬಾರಿ ಅಖಂಡ ಭಾರತದ (ಭೂ ಪ್ರದಕ್ಷಿಣೆ) ಪರ್ಯಟನ ಕೈಗೊಂಡಿದ್ದುದು. ಪೆನುಗೊಂಡೆಯ ಶ್ರೀ ರಂಗರಾಯನು ಸುರೇಂದ್ರರಿಗೆ ಹಲವಾರು ಗ್ರಾಮಗಳನ್ನು ದಾನ ಮಾಡಿದ್ದನು. ಆದರೆ ಅವರು ಅದನ್ನು ೫೦ ವೃತ್ತಗಳಾಗಿ ವಿಭಾಗಿಸಿ, ಏಳು ವೃತ್ತಿಗಳನ್ನು ಮಾತ್ರ ಇಟ್ಟುಕೊಂಡು ಉಳಿದುದನ್ನು ವಿದ್ವಾಂಸರಾದ ಬ್ರಾಹ್ಮಣರಿಗೆ ಹಂಚಿಬಿಟ್ಟರು.

ಪುಷ್ಯ ಶುದ್ಧ ದ್ವಾದಶಿಯಂದು ಶ್ರೀಗಳವರು ವೈಕುಂಠಕ್ಕೆ ನಿರ್ಗಮಿಸಿದರು. ಅವರ ವೃಂದಾವನವು ಮಧುರೆಯಲ್ಲಿದೆ.



---

* ಶ್ರೀ ಸುರೇಂದ್ರರ ನಿರ್ಯಾಣ ಕಾಲವನ್ನು ಕ್ರಿ.ಶ. ೧೫೭೫ ಯುವ ಸಂವತ್ಸರವೆಂದು ಗುರುಚರಿತೆಯಲ್ಲಿಯೂ ಅದನ್ನು ಆಧಾರವಾಗಿಟ್ಟುಕೊಂಡು 'ಅಜಯ್ಯ ವಿಜಯೀಂದ್ರ' ಕೃತಿಯಲ್ಲಿಯೂ ಹೇಳಿದೆ. ಆದರೆ 'ವಿಜಯೀಂದ್ರ ವಿಜಯ'ವೆಂಬ ಸಂಸ್ಕೃತ ಗ್ರಂಥದಲ್ಲಿ ವಿಕಾರಿ ಸಂವತ್ಸರವೆಂದು ಕಾಣಿಸಿದೆ. ಈ ಸಂವತ್ಸರದ ಕ್ರಿಸ್ತ ವರ್ಷ ೧೫೭೯. (ತಿಥಿ ಮಾತ್ರ ಎರಡೂ ಕಡೆ ಒಂದೇ ದಾಖಲಾಗಿದೆ. ಅದುವೆ ಪುಷ್ಯ ಶುದ್ಧ ದ್ವಾದಶಿ.) ಆದರೆ ಅವರ ವೃಂದಾವನ ಇರುವುದು ಮಧುರೆಯಲ್ಲಿ. ಮೇಲ್ಕಾಣಿಸಿದ ಸಂಸ್ಕೃತ ಗ್ರಂಥದಲ್ಲಿಯಾದರೋ ಅದು 'ಆನೆಗೊಂದಿ' ಎಂಬುದಾಗಿ ಹೇಳಿದೆ.

ಸ್ವಾಂತಕಾಲೇಚ ಸಂಪ್ರಾಪ್ತೇ ಸುರೇಂದ್ರೋ ಗಜಗಹ್ವರೇ
ವಿಕಾರಿ ಸಂವತ್ಸರೇ ಪುಷ್ಯ ಶುಕ್ಲದ್ವಾದಶೀ ತಿಥೌ||

ಈ ಕಾರಣದಿಂದ 'ವಿಜಯೀಂದ್ರ ವಿಜಯ'ದ ದಾಖಲೆ ಸಂದೇಹಕ್ಕೆ ಅವಕಾಶವೀಯುವಂತಿದೆ. ಈ ವಿಷಯಕವಾದ ಚರ್ಚೆಗೆ ತತ್ತ್ವವಾದ ಆಗಸ್ಟ್ ೨೦೦೨ರ ಸಂಚಿಕೆಯಲ್ಲಿ ಪ್ರಕಟವಾದ 'ಶ್ರೀ ವಿಜಯೀಂದ್ರರ ನಿಶ್ಚಿತ ಕಾಲ ಯಾವುದು?' ಎಂಬ ನನ್ನ ಲೇಖ ನೋಡಬಹುದು. - ಸಂ.

* ಪುರಂದರದಾಸರು ಈ ಘಟನೆಯನ್ನು ಹೀಗೆ ನಿರೂಪಿಸಿದ್ದಾರೆ.

ಶ್ರೀ ಸುರೇಂದ್ರರನು ಪುತ್ರಭಿಕ್ಷವ ನೀಡೆ,
ವಿಜಯೀಂದ್ರನ್ನ ಕರುಣಿಸಿ ಮಠವನ್ನುದ್ಧರಿಸಿದ ಕಾರಣ
ಗುರು ವ್ಯಾಸರಾಯರೇ ಪರಮ ಗುರುಗಳು.

## ೭

(ಧಾಟಿ: ತಂಗಿಗ್ಹೇಳಿದ ಕೃಷ್ಣ - ಎಂಬಂತೆ )

ಶ್ರೀ ಸುರೇಂದ್ರರ ಪಾದ ತೋಷದಲಿ ತುತಿಸೆ ಮತಿ
ಮೀಸಲಾಗಲಿ ಎಂದು ಶ್ರೀಶನ್ನ ಬೇಡುವೆನು ಪ.
ಕೋಶ - ಧನ - ಸ್ತ್ರೀ - ಮೋಹ - ಆಶಾದಿಗಳ ಕಳೆದು
ವಾಸುದೇವನ ದಿವ್ಯ ದಾಸ್ಯವನೆ ಕೊಡು ಎಂದು ಅ.ಪ.

ಶ್ರೀ ರಘುನಂದನರ ಕರಪಾರಿಜಾತರಾಗಿ
ಶ್ರೀ ರಘುವಂಶಾಬ್ಧಿಚಂದ್ರನ್ನ ಪೂಜಿಸುತ
ಧಾರುಣಿಯ ಎರಡೊಂದು ಬಾರಿ ಅನಶನ ವ್ರತದಿ
ಸಾರಿ ದುರ್ವಾದಿಗಳ ಧೀರರೋಡಿಸಿದಾ ೧

ಚಂಡ ತೇಜದಿ ಇವರು ದಂಡಧಾರಿ ಶ್ರೀಕ -
ಮಂಡಲವ ಧರಿಸಿ ಕೋದಂಡಪಾಣಿಯ ನೆನೆದು
ಭಂಡ ಮತಗಳ ಶಾಸ್ತ್ರ ಕಂಡು ಮುರಿದ ಮಧ್ವರ
ಹಿಂಡು ಕೃತಿಗಳ ಪಠಿಸಿ ಪಂಡಿತೋತ್ತಮರಾದಾ ೨

ಮಧುವೈರಿಯಾಜ್ಞೆಯಲಿ ವಿಜಯೀಂದ್ರತೀರ್ಥರಿಗೆ
ಮುದದಿಂದ ಪಟ್ಟಗಟ್ಟಿ, ವಿಧಿಜನಕ ಲಕುಮೀಶನ
ಪದ ನೆನೆದು ಮುಕ್ಕೋಟಿ ದ್ವಾದಶೀ ದಿನದಂದು
ಮಧುರೆ ಪಟ್ಟಣದಲ್ಲಿ ವೃಂದಾವನವ ಸೇರ್ದಾ ೩

■ ■ ■

# ೫. ಶ್ರೀ ವಿಜಯೀಂದ್ರತೀರ್ಥರು

(೧೫೧೬-೧೫೭೫-೧೬೧೪)

ಶ್ರೀ ವಿಜಯೀಂದ್ರತೀರ್ಥರು ಮಂತ್ರಾಲಯ ಮಠದ ಪೀಠಸ್ಥರಾದದ್ದು ೧೫೭೫ರಲ್ಲಿ ಆದರೆ ಅದಕ್ಕೂ ಸು. ೬೨ ವರ್ಷಗಳ ಹಿಂದೆ ಶ್ರೀ ವ್ಯಾಸರಾಯರಿಂದ ಸನ್ಯಾಸ ದೀಕ್ಷೆ ಪಡೆದು 'ವಿಷ್ಣುತೀರ್ಥ'ರೆಂಬ ನಾಮದಿಂದ ಧರ್ಮಪ್ರಸಾರ, ದಿಗ್ವಿಜಯ ಮುಂತಾದ ಕಾರ್ಯಗಳಲ್ಲಿ ತೊಡಗಿದ್ದರು. ತಮ್ಮ ಗುರುಗಳಾದ ಶ್ರೀ ಸುರೇಂದ್ರರಂತೆ ಶತಾಯುಷ್ಯದ ಹತ್ತಿರ ಬರುವಷ್ಟು ದೀರ್ಘಕಾಲ ಬಾಳಿದರು. ಅಂತಾಗಿ ಅವರು ಸಾಧಿಸಿದ್ದುದು ಅತ್ಯಂತ ವಿಸ್ತಾರವೂ ಉಜ್ವಲವೂ ಎನಿಸಿದ್ದಿತು. ಇಲ್ಲಿ ಸಂಕ್ಷೇಪವಾಗಿ ಅವನ್ನು ಕೊಡಮಾಡಿದೆ.

**ವಾದಿನಿಗ್ರಹ :** ತಮ್ಮ ಜೀವಿತದ ಪೂರ್ವಾರ್ಧದಲ್ಲಿ ನವದ್ವೀಪದ ಕೃಷ್ಣಶರ್ಮರನ್ನು ತರ್ಕಶಾಸ್ತ್ರದಲ್ಲಿಯೂ, ಕಂಚಿಯ ಮೀಮಾಂಸಕದ್ವಯರನ್ನೂ, ಅದರಂತೆ ವೀರಶೈವ ಮಠದ ಓರ್ವ ಆರಾಧ್ಯರನ್ನೂ ನಿರಾಯಾಸದಿಂದ ನಿರುತ್ತರರನ್ನಾಗಿ ಮಾಡಿದ್ದರು. ಕೋಲಾರದಲ್ಲಿ ಮೀಮಾಂಸಾಚಾರ್ಯ ಎಂದೇ ಹೆಸರನ್ನಿಟ್ಟುಕೊಂಡಿದ್ದ ಓರ್ವ ಮೀಮಾಂಸಕರನ್ನು ವಾದದಲ್ಲಿ ಗೆದ್ದರು. ಈ ಬಗೆಯ ವಿಜಯದ ದ್ಯೋತಕವೆಂದು ಕೋಲಾರದಲ್ಲಿ ಬೃಹದಾಕಾರದ ಆಂಜನೇಯ ಮೂರ್ತಿಯನ್ನು ನಿಲ್ಲಿಸಿದರು. ಇಷ್ಟೊಂದು ಭವ್ಯವಾದ ಹನುಮಂತ ವಿಗ್ರಹ ಬೇರೆಡೆ ಸುಲಭವಾಗಿ ಕಾಣಿಸದು.

ಕುಂಭಕೋಣದಲ್ಲಿ ಲಿಂಗರಾಜೇಂದ್ರ ಎಂಬ ಶೈವ ವಿದ್ವಾಂಸರನ್ನು ವಾದದಲ್ಲಿ ಗೆದ್ದದ್ದು ಶ್ರೀ ವಿಜಯೀಂದ್ರರ ವಿಶೇಷ ವಿಜಯವೆನ್ನಬೇಕು. ಎಮ್ಮೆ ಬಸವೇಂದ್ರರೆಂದೂ ಪರಿಚಿತರಾಗಿದ್ದ ಅವರು ಅಲ್ಲಿಯ ಕುಂಭೇಶ್ವರನ [illegible] ದೇವಾಲಯಗಳ ಆಧಿಪತ್ಯವನ್ನು ಹೊಂದಿದ್ದ ಪ್ರಭಾವಶಾಲೀ ವ್ಯಕ್ತಿಯಾಗಿದ್ದರು. ಅವರೀರ್ವರ ವಾದವನ್ನು ಕೇಳಲು ಜನಸಮ್ಮರ್ದವೇ ನೆರೆದಿತ್ತು. ಶ್ರೀಗಳವರು ಸುರುವಿಗೆ ಬಸವೇಂದ್ರರ ಶೈವ ಪಾರಮ್ಯದ ವಾದವನ್ನೆಲ್ಲ ಖಂಡಿಸಿ, ವಿಷ್ಣು ಸರ್ವೋತ್ತಮತ್ವವನ್ನು ಎಲ್ಲರಿಗೂ ಮನವರಿಕೆಯಾಗುವಂತೆ ನೆಲೆಗೊಳಿಸಿದರು. ಈ ವಾದವಿವಾದದಲ್ಲಿ ತಾನು ಸೋತರೆ ಕುಂಭೇಶ್ವರ ದೇವಾಲಯದ ಸರ್ವಸ್ವವನ್ನು ಬಿಟ್ಟುಕೊಡಬೇಕೆಂಬ ಕರಾರು ಆಗಿಟ್ಟಿತು. ಅವರು ಹಾಗೆ ಮಾಡಲು ಮುಂದೆ ಬಂದಾಗ ಶ್ರೀಗಳು ಆ ದೇವಾಲಯಕ್ಕೆ ಸಂಬಂಧಿಸಿದ ಸನದುಗಳನ್ನು ಮತ್ತು ಜಯಸೂಚಕವಾಗಿ ಒಂದು ಗಂಟೆಯನ್ನು ಇಟ್ಟುಕೊಂಡು ಉಳಿದೆಲ್ಲ ಚರಾಚರ ಆಸ್ತಿಯನ್ನು ಬಸವೇಂದ್ರರಿಗೇ ಬಿಟ್ಟುಕೊಟ್ಟರು.

ಇದೇ ಕುಂಭಕೋಣದಲ್ಲಿ ಜರುಗಿದ ಇಬ್ಬರು ಅದ್ವೈತ ಪಂಡಿತರ ವಾದವನ್ನು ಪ್ರಸ್ತಾಪಿಸತಕ್ಕುದು. ಒಬ್ಬರು ಭಟ್ಟೋಜಿ ದೀಕ್ಷಿತರು. ಟೀಕಾಕೃತ್ಪಾದರ ಗ್ರಂಥಗಳಲ್ಲಿ ವ್ಯಾಕರಣ ದೋಷಗಳಿವೆ ಎಂದು ಹೇಳುತ್ತ ವ್ಯಾಕರಣ ಶಾಸ್ತ್ರದ ತಳಹದಿಗೇ ಕೈ ಹಾಕಿದರು. ಆಗ ಶ್ರೀಗಳವರ ವಾದ ವೈಖರಿ ಚೆನ್ನಾಗಿ ಬೆಳಕಿಗೆ ಬಂತು. ಚರ್ಚೆ ಹಲವು ದಿನಗಳವರೆಗೆ ಮುಂದುವರಿದಾಗ ಆ ಸುದ್ದಿ ತಿಳಿದು ತಂಜಾವೂರಿನ ರಾಜ ಚೆವ್ವಪ್ಪ ನಾಯಕನು ಆಗ ತಮ್ಮಲ್ಲಿಯೇ ಇದ್ದ ಶ್ರೀ ಸುರೇಂದ್ರತೀರ್ಥರ ಜೊತೆಗೂಡಿ ಕುಂಭಕೋಣಕ್ಕೆ ಆಗಮಿಸಿದರು. ಕೊನೆಯ ಘಟ್ಟದಲ್ಲಿ ಭಟ್ಟೋಜಿ ದೀಕ್ಷಿತರು ಸೋಲನ್ನು ಒಪ್ಪಿಕೊಂಡರು.

ಎರಡನೆಯವರು ಅಪ್ಪಯ್ಯ ದೀಕ್ಷಿತರು. ಈ ಮಹಾನ್ ಪಂಡಿತರು ಅಖಿಲ ಭಾರತದಲ್ಲೆಲ್ಲ ಹೆಸರು ಮಾಡಿದವರು. ಅದ್ವೈತ ಪರಂಪರೆಯಲ್ಲಿ ಶ್ರೀ ಶಂಕರಾಚಾರ್ಯರು ಮತ್ತು ಶ್ರೀ ವಿದ್ಯಾರಣ್ಯರ ಅನಂತರ ಕೇಳಿಬಂದ ಹೆಸರು ಇವರದ್ದೇ. 'ಶೈವಾದ್ವೈತ' ಎಂಬ ಹೊಸ ಪಂಥವನ್ನೇ ಸ್ಥಾಪಿಸಿದರು. ಅದ್ವೈತ ಮತದಲ್ಲಿ ಶಿವನೇ ಸರ್ವೋತ್ತಮ ಎಂಬುದು ಅದರ ತಿರುಳು. (ವೈಷ್ಣವರು ಶ್ರೀಹರಿಯ ಪಾರಮ್ಯವನ್ನು ಹೇಳುವುದಕ್ಕೆ ಪ್ರತಿಯಾಗಿ ಹೊರಬಂದದ್ದು). ಸಹಸ್ರಾರು ಜನರ ಸಮೂಹದಲ್ಲಿ ನಡೆದ ಅತ್ಯುನ್ನತ ಮಟ್ಟದ ಚರ್ಚೆ ಅದಾಗಿತ್ತು. ವಾದ - ಪ್ರತಿವಾದಗಳು ಪುಂಖಾನುಪುಂಖವಾಗಿ ಹೊರಹೊಮ್ಮಿದವು. ( ಆ ಚರ್ಚೆಯ ಕೆಲವು ಸ್ವಾರಸ್ಯಕರ ಮಾದರಿಗಳನ್ನು 2ನೆಯ ಅನುಬಂಧದಲ್ಲಿ ಕೊಟ್ಟಿದೆ.) ಕೊನೆಯಲ್ಲಿ ಅಪ್ಪಯ್ಯ ದೀಕ್ಷಿತರು ಶ್ರೀಗಳವರ ವಿಚಾರಸರಣಿಯನ್ನೂ ವಾದ-ವೈಖರಿಯನ್ನು ಒಪ್ಪಿಕೊಂಡು ಪ್ರಣಾಮ ಸಲ್ಲಿಸಿದರು. ಈ ವಿಜಯದಿಂದಾಗಿ ಇಡೀ ದಕ್ಷಿಣ ಭಾರತದಲ್ಲಿ ಮಧ್ವ ಸಿದ್ಧಾಂತಕ್ಕೆ ಅಪೂರ್ವವಾದ ಮನ್ನಣೆ ಸಂದಿತು.

**ಕಲಾನೈಪುಣ್ಯ :** ಎಲ್ಲ ೬೪ ಕಲೆಗಳಲ್ಲಿ ಶ್ರೀ ವಿಜಯೀಂದ್ರರು ನಿಷ್ಣಾತರಿದ್ದದ್ದೊಂದು ವಿಶೇಷ. ಇವಕ್ಕೆ ಸಂಬಂಧಿಸಿದ ಅನೇಕ ಘಟನೆಗಳು ಜರುಗಿ ಹೋಗಿವೆ. ಮಲೆಯಾಳದ ಮಾಂತ್ರಿಕನೊಬ್ಬ 'ಮೋಡಿ'ಯ ಪಂಥವನ್ನು ಹಾಕಿದ. ಎಂದರೆ ಒಂದು ವಸ್ತುವನ್ನು ಮಧ್ಯದಲ್ಲಿಟ್ಟು ಅದರ ಸುತ್ತು ಮಂತ್ರಿಸಿದ ಗೆರೆಗಳನ್ನು ಹಾಕುವುದು. ಅವನ್ನು ದಾಟುವುದರಲ್ಲಿ ಘೋರ ಸ್ವರೂಪದ ವಿಘ್ನಗಳು. ಹಾಗಿದ್ದರೂ ಅದನ್ನು ಎತ್ತಿ ತೆಗೆಯಬೇಕೆಂಬುದೇ ಆ ಪಂಥ. ಶ್ರೀಗಳವರು ಪ್ರತಿಮಂತ್ರ ಹಾಕಿ ಆ ಮಧ್ಯದ ವಸ್ತುವನ್ನು ಮೇಲೆತ್ತಿದರಂತೆ. ಕುಂಭಕೋಣದಲ್ಲಿಯ ದೇವಾಲಯವನ್ನು ನಾಶ ಮಾಡಲು ಬಂದಿದ್ದ ಮುಸ್ಲಿಮರಿಗೆ ಮುಂದೇನು ಮಾಡಬೇಕೆಂಬ ಯೋಚನೆಯೇ ತಡೆದು ನಿಂತಿತಂತೆ, ಶ್ರೀಗಳವರ ಮಂತ್ರಶಕ್ತಿಯಿಂದಾಗಿ; ವಾಪಸ್ಸು ಹೋದರು.

ಕೆಲವು ಕುಹಕಿಗಳು ಅವರ ಗ್ರಂಥದ ಪೆಟ್ಟಿಗೆಯನ್ನು ಅಪಹರಿಸಿದಾಗ ಆಕರ್ಷಣ ಮಂತ್ರಶಕ್ತಿಯಿಂದ ತಾವಿದ್ದಲ್ಲಿಗೇ ಬರುವಂತೆ ಮಾಡಿದರಂತೆ. ಇಂಥವು ಇನ್ನೂ ಅನೇಕ.

ಶಿಲ್ಪಕಲೆಯಲ್ಲಂತೂ ಶ್ರೀಗಳಿಗೆ ಅಸದೃಶವೆನಿಸುವ ಪರಿಣತಿ ಇತ್ತು. ವಿನಾಯಕ ರಾಮಚಂದ್ರ ಜೋಶಿ ಎಂಬ ಅಕ್ಕಸಾಲಿಗನು ಸುಂದರ ಪದಕವೊಂದನ್ನು ಮಾಡಿ ತಂದನಂತೆ. ಶ್ರೀಗಳವರು ಶ್ರೀರಾಮನ ಮೂರ್ತಿ ಇರುವ ಪದಕವನ್ನು ಅದಕ್ಕೂ ಮಿಗಿಲಾಗಿ ತಯಾರಿಸಿ ತೋರಿಸಿದರು. ಅವರು ನಿರ್ಮಿಸಿದ ಇಂಥ ಐವತ್ತಕ್ಕೂ ಮಿಕ್ಕಿದ ವಿವಿಧ ಮೂರ್ತಿಗಳು ಇಂದಿಗೂ ಮಠದಲ್ಲಿವೆ. ಸಂಗೀತದ ಅಭಿಜ್ಞತೆಯು ಅವರಲ್ಲಿ ವಿಶೇಷವಾಗಿದ್ದಿತು. ವೀಣೆ ನುಡಿಸುವಲ್ಲಿ ಅವರ ನೈಪುಣ್ಯ ಜನಜನಿತವಾಗಿದ್ದಿತು. ಯಾವುದೇ ಕಲೆ ಇರಲಿ, ಲೌಕಿಕರು ಅದಕ್ಕಾಗಿ ಪ್ರ್ಯಾಕ್ಟೀಸ್ ಮಾಡಬೇಕಾಗುತ್ತದೆ. ಶ್ರೀ ವಿಜಯೀಂದ್ರರು ತಮ್ಮ ತಪೋಬಲದಿಂದ ಈ ಕಲೆಗಳನ್ನು ಕರಗತಮಾಡಿ ಕೊಂಡಿದ್ದರು.

**ಸನ್ಮಾನಗಳು:** ಶ್ರೀಗಳವರಿಗೆ ಸಂದಿದ್ದ ಗೌರವ ಹಾಗೂ ರಾಜ ಮರ್ಯಾದೆಗಳು ಲೆಕ್ಕವಿಲ್ಲದಷ್ಟು. ತಂಜಾವೂರಿನ ಚೆವ್ವಪ್ಪ ನಾಯಕ, ಮಧುರೆಯ ವಿಶ್ವನಾಥ ನಾಯಕರಲ್ಲದೆ ವಿಜಯನಗರ ಸಾಮ್ರಾಜ್ಯದ ಆ ಕಾಲದ ರಾಮರಾಯನು ಅನೇಕ ಬಾರಿ ಅವರನ್ನು ರಾಜಧಾನಿಗೆ ಬರಮಾಡಿಕೊಂಡಿದ್ದನು. ಆಡಳಿತದಲ್ಲಿ ಸಮಸ್ಯೆಗಳು, ಒಡಕುಗಳು ಉಂಟಾದಾಗ ಅವರೊಡನೆ ಸಮಾಲೋಚನೆ ಮಾಡುತ್ತಿದ್ದದ್ದು, ಈ ಹಿಂದೆ ಕೃಷ್ಣದೇವರಾಯನ ಕಾಲಕ್ಕೆ ಶ್ರೀ ವ್ಯಾಸರಾಯರಿಗಿದ್ದ ಮರ್ಯಾದೆಯನ್ನು ನೆನಪಿಗೆ ತರುವಂತಿದ್ದಿತು. ಮಾತ್ರವಲ್ಲ, ಅವರಿಗೆ ಸರ್ವಜನ ಸಮ್ಮುಖದಲ್ಲಿ ಆ ರಾಜನು ವೈಭವೋಪೇತವಾಗಿ ರತ್ನಾಭಿಷೇಕ ಮಾಡಿದ. ರಾಜಮರ್ಯಾದೆಯ ಅಂಗವಾಗಿ ಅನೇಕ ಗ್ರಾಮಗಳು ಉಂಬಳಿಯಾಗಿ ದೊರೆತವು.

ಉಡುಪಿಯಲ್ಲಿ ಶ್ರೀ ವಾದಿರಾಜತೀರ್ಥರ ಪರ್ಯಾಯವಿದ್ದಾಗ ( ೧೫೬೪-೬೫ರದಿರಬಹುದು. ) ಶ್ರೀ ವಿಜಯೀಂದ್ರರು ಭೇಟ್ಟಿ ಇತ್ತರು. ಶ್ರೀ ವಾದಿರಾಜರು ಉಡುಪಿಯ ರಥಬೀದಿಯಲ್ಲಿ ಜಾಗ ದಾನವಾಗಿತ್ತರು. ಅದೀಗ ಶ್ರೀ ರಾಘವೇಂದ್ರ ಮಠವಾಗಿ ಉಳಿದಿದೆ.

ಇಷ್ಟೆಲ್ಲ ವ್ಯವಹರಣೆಯಲ್ಲಿ ಶ್ರೀ ವಿಜಯೀಂದ್ರರು ಗ್ರಂಥ ರಚನೆಗೂ ತೊಡಗಿರುತ್ತಿದ್ದದ್ದು ಆಶ್ಚರ್ಯಕರವಾಗಿದೆ. ಕೆಲವು ಮಾತ್ರವಲ್ಲ; ೧೦೪ ಗ್ರಂಥಗಳು. ಅವುಗಳಲ್ಲಿ ಕೆಲವು ಅಲಭ್ಯವಿದ್ದರೂ, ಸುಮಾರು ೭೦ರಷ್ಟು ಈಚೆಗೆ ಮುದ್ರಿತಗೊಂಡಿವೆ. ಅವನ್ನು ಹೀಗೆ ವರ್ಗೀಕರಿಸಬಹುದು.

(ಅ) ಶ್ರುತಿ-ಸೂತ್ರಗಳ ಮೇಲಿನ ಸ್ವತಂತ್ರ ವಿವರಣೆ. ಉದಾಹರಣೆಗೆ 'ಶ್ರುತಿ ತಾತ್ಪರ್ಯ ಕೌಮುದೀ', 'ಶ್ರುತ್ಯರ್ಥಸಾರ'. ಈ ಕೃತಿಗಳಲ್ಲಿ ಶ್ರೀಮದಾಚಾರ್ಯರು ಹೇಳಿದ ಸಿದ್ಧಾಂತಗಳು ಹೇಗೆ ಅಡಕವಾಗಿವೆ ಎಂಬುದನ್ನು ವಿವರಿಸುತ್ತವೆ.

(ಅ) ಮಧ್ವ ಸಿದ್ಧಾಂತವಿರುವ ಮೌಲಿಕ ಕೃತಿಗಳ ಟೀಕಾಗ್ರಂಥಗಳು. ಉದಾಹರಣೆಗೆ ದಶಪ್ರಕರಣಗಳ ಮೇಲಿನ ಜಯತೀರ್ಥರ ವ್ಯಾಖ್ಯಾನ ಗ್ರಂಥಗಳಿಗೆ ವಿವರಣೆಗಳು. ಅದರಂತೆ ತಮ್ಮ ಗುರುಗಳಾದ ಶ್ರೀ ವ್ಯಾಸರಾಯರ ಚಂದ್ರಿಕಾದಿ ಗ್ರಂಥತ್ರಯಕ್ಕೆ ಬರೆದ ಟೀಕೆ ಟಿಪ್ಪಣಿಗಳು; ಉದಾ.ಗೆ ತತ್ವಸಂಖ್ಯಾನಟೀಕಾ ವ್ಯಾಖ್ಯಾನ.

(ಇ) ಅಪ್ಪಯ್ಯದೀಕ್ಷಿತ ಮೊದಲಾದ ಅದ್ವೈತಿಗಳು ಮಾಧ್ವಮತದ ಖಂಡನ ಮಾಡಿದ್ದರ ಗ್ರಂಥಗಳಿಗೆ ಪ್ರತಿಖಂಡನ ಕೃತಿಗಳು. ಉದಾಹರಣೆಗೆ, 'ಅದ್ವೈತ ಕಪೋಲಚಪೇಟಿಕಾ', 'ಭೇದವಿದ್ಯಾವಿಲಾಸವಾಗ್ವೈಖರೀ' ಮುಂತಾದವುಗಳು. ಇಲ್ಲೆಲ್ಲ ಶ್ರೀಗಳು ವಾದಿಸಿಗ್ರಹದ ಕಾಲಕ್ಕೆ ತೋರಿದ ವಾಗ್ವೈಖರಿ ಸುವ್ಯಕ್ತವಾಗಿದೆ.

(ಈ) ನ್ಯಾಯಶಾಸ್ತ್ರ ವ್ಯಾಕರಣಶಾಸ್ತ್ರ, ಮಿಮಾಂಸಾ ಮುಂತಾದ ವಿವಿಧ ದರ್ಶನಗಳನ್ನು ವಿವರಿಸುವ ಕೃತಿಗಳು. ಉದಾಹರಣೆಗೆ, 'ಮೀಮಾಂಸಾನ್ಯಾಯಕೌಮುದೀ', 'ನ್ಯಾಯ ಮೌಕ್ತಿಕ ಮಾಲಾ'.

**ಸಾಹಿತ್ಯ ಸ್ತೋತ್ರ ಕೃತಿಗಳು:**

ನೃಸಿಂಹಾಷ್ಟಕ, ಶ್ರೀ ವ್ಯಾಸರಾಜಾಭ್ಯುದಯ ಕಾವ್ಯ, ಸುಭದ್ರಾ ಧನಂಜಯ ನಾಟಕ, ಮೊದಲಾದ ಕೃತಿಗಳು. ಇವುಗಳಲ್ಲಿ ಪದಲಾಲಿತ್ಯ, ಕಲ್ಪಕತೆ, ಗಾಂಭೀರ್ಯಾದಿ ಗುಣಗಳನ್ನು ಕಾಣಬಹುದು.

ಇವೆಲ್ಲ ಕೃತಿಗಳು 'ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಗಮನಕ್ಕೆ ಬಂದವುಗಳೇ ಆಗಿದ್ದು, ತಾವು ರಚಿಸಿದ ಗ್ರಂಥಗಳಲ್ಲಿ, 'ವಿಶೇಷ ವಿಷಯಗಳಿಗೆ ವಿಜಯೀಂದ್ರ ಗುರುಗಳು ರಚಿಸಿದ 'ನ್ಯಾಯಮೌಕ್ತಿಕ ಮಾಲಾ' ಮುಂತಾದ ಗ್ರಂಥಗಳನ್ನು ನೋಡಬೇಕೆಂದು' ನಮ್ರತೆಯಿಂದ ಸೂಚಿಸಿದ್ದಾರೆ. ("ವಿಸ್ತರಸ್ತು ಗುರುಪಾದಕೃತ ನ್ಯಾಯಮೌಕ್ತಿಕಮಾಲ ಯಾಂದ್ರಷ್ಟವ್ಯ").

ಶ್ರೀ ವಿಜಯೀಂದ್ರರು ಸಂಸ್ಕೃತದಲ್ಲಿ ಅಲ್ಲದೆ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಇನ್ನಷ್ಟು ಅಚ್ಚರಿ ಪಡಬೇಕಾಗಿದೆ. ದೊರೆತದ್ದು ಕೇವಲ ಐದು ಹಾಡುಗಳು ಮಾತ್ರ. ಸುಳಾದಿಗಳನ್ನೂ ರಚಿಸಿದ್ದಾರಂತೆ. ದೊರತಷ್ಟನ್ನು ಮೊದಲ ಅನುಬಂಧದಲ್ಲಿ ಕೊಡಲಾಗಿದೆ. ವಿಶೇಷತಃ ಶ್ರೀ ವ್ಯಾಸರಾಯರನ್ನು ಕುರಿತ ಹಾಡಿನಲ್ಲಿಯ ಕಲ್ಪಕತೆ ಮನೋಜ್ಞವಾಗಿದೆ.

ಕುಂಭಕೋಣವು ಅವರು ಮೆಚ್ಚಿಕೊಂಡ ಸ್ಥಳವಾಗಿದ್ದಿತು. ಹೆಚ್ಚಿನ ವರ್ಷಗಳನ್ನು ಅಲ್ಲಿಯೇ ಕಳೆದಿದ್ದರು. ತಮ್ಮ ೯೭ನೆಯ ವಯಸ್ಸಿನಲ್ಲಿ ಅಲ್ಲಿಯೇ ಹರಿಪಾದವನ್ನು ಸೇರಿದರು.

ಅರ್ಧ ಶತಮಾನದವರೆಗಿನ ಅವರ ಜೀವನ ಕಾರ್ಯ, ಸಾಧಿಸಿದ ಔನ್ನತ್ಯ ಮಂತ್ರಾಲಯ ಮಠದಲ್ಲಿ ಮಾತ್ರವಲ್ಲ ಮಾಧ್ವ ಪರಂಪರೆಯಲ್ಲಿಯೇ ಧ್ರುವನಕ್ಷತ್ರದಂತೆ ರಾರಾಜಿಸುತ್ತದೆ.

ವಿ.ಸೂ.: ಶ್ರೀ ವಿಜಯೀಂದ್ರತೀರ್ಥರ ಸವಿವರ ಚರಿತ್ರೆಯನ್ನು ಸಂಸ್ಕೃತದಲ್ಲಿ ಮಧ್ವಪತಿ ಎಂಬವರು ರಚಿಸಿದ್ದಾರೆ. ಅದುವೆ 'ವಿಜಯೀಂದ್ರ ವಿಜಯ.' ಸಮಕಾಲೀನ ಕೃತಿಯಾಗಿದೆ. ಆದರೆ ಅದರಲ್ಲಿ ಅಸಂಖ್ಯ ತಪ್ಪುಗಳಿದ್ದು ಈ ಮೇಲೆ ಪ್ರಸ್ತಾಪಿಸಿದ ಲೇಖನದಲ್ಲಿ ಎತ್ತಿ ತೋರಿಸಲಾಗಿದೆ. ಇತ್ತ ಆಧುನಿಕ ಗದ್ಯದಲ್ಲಿ ಶ್ರೀ ರಾಜಾ ಎಸ್. ಗುರುರಾಜಾಚಾರ್ಯರು 'ಅಜಯ್ಯ ವಿಜಯೀಂದ್ರ'ರೆಂಬ ಶೀರ್ಷಿಕೆಯಲ್ಲಿ ಇನ್ನಷ್ಟು ವಿಶದವಾಗಿ ಅವರ ಚರಿತ್ರೆಯನ್ನು ಬರೆದಿದ್ದಾರೆ. ಆಧಾರಸಹಿತವಾಗಿ ಸರಸಪ್ರೌಢ ರೀತಿಯಲ್ಲಿ ಬರೆದ ಈ ಚರಿತ್ರ ಕಥನವನ್ನು ಅವಶ್ಯವಾಗಿ ಓದತಕ್ಕದು.

■ ■ ■

## ೮

**(ರಾಗ : ಶಂಕರಾಭರಣ ತಾಳ :ಝಂಪೆ)**

**ವಿಜಯೀಂದ್ರ ಯತಿಯ ನಾ ಕಂಡೆ ಮುದಗೊಂಡೆ**
ವಿಜಯ ಡಂಗುರ ಹೊಯಿಸಿ ಗಜವೇರಿ ಬರುತಿಪ್ಪ ಪ.

ನಿಜದಿ ಲಿಂಗಣ್ಣನ ಗೆಲಿದು ಮಠವನು ಪಡೆದು
ಸುಜನರ ಭಯ ಪರಿಹರಿಸುತ ಮೆರೆಯುವ ಅ.ಪ.

ಹರಿಯೆ ಪರನೆಂಬನ ಸರ್ವಶಾಸ್ತ್ರ ಕೋವಿದನ
ಧರಣೀಶಸುತ ವ್ಯಾಸಮುನಿಯ ವಿದ್ಯಾಸುತನ ೧

ಸುಖಮುನಿಯಾಸ್ಥಾನ ರಾಜನ ವರತೇಜನ
ಅಕಳಂಕ ಮಹಿಮ ಸಿರಿ ಸುರೇಂದ್ರನ ಕುವರನ ೨

ಚೌಷಷ್ಠಿ ಕಲೆಗಳರಿತವನ ಮಾಯಿ ಭೀಕರನ
ಶ್ರೀಶ ಗುರುಪುರಂದರವಿಠಲನ್ನ ಭಜಪನ್ನ ೩

■ ■ ■

## ೯

[ರಾಗ: ಮುಖಾರಿ ತಾಳ: ಝಂಪೆ]

ವಿಜಯೀಂದ್ರ ಮುನೀಂದ್ರರೆಂಬಾಶ್ಚರ್ಯದ
ಗಜೇಂದ್ರ ಬಂದಿದೆ ಸುಜನರು ನೋಡೋಣ ಬನ್ನಿ ಪ.

ಕಲುಷವೆಂಬ ಪಂಕವನೀಡ್ಯಾಡಿ ವಿ-
ಮಲ ಶ್ರೀಹರಿಯ ಪಾದತೀರ್ಥವ
ಜಲಪಾನವ ಮಾಡಿ ಮಧ್ವ ಮತಾಂಬುಧಿ -
ಯೊಳು ಮುಳುಗಿ ನಲಿದಾಡುತಲಿ ೧

ರಮೇಶನ ಧ್ಯಾನವೆಂಬ ಮದವೇರಿ
ಕುಮತಿ ಕದಳಿಯನು ಕಿತ್ತೀಡ್ಯಾಡಿ
ವಿಮಲ ಶ್ರೀಹರಿಪಾದರಜವ ಶಿರದಲಿ ತಾಳಿ
ಕುಮತಗಳೆಂಬ ತರುಗಳ ಮುರಿಯುತಲಿ ೨

ಗುರು ಸುರೇಂದ್ರತೀರ್ಥರೆಂಬ ಮಾವಟಿಗನಾಜ್ಞದಲ್ಲಿದ್ದು
. . . . . .
ಗುರುಮಧ್ವಪತಿವಿಠಲನ ನವವಿಧ ಭಕ್ತಿ
ಸರಪಳಿಯೊಳು ನಲಿನಲಿದಾಡುತಲೀ ೩

■ ■ ■

## ೧೦

[ರಾಗ: ಪಂತುರಾವಳಿ ತಾಳ : ]

ಸೂರ್ಯಾ ಸುಗುಣಾರ್ಯಾ ಶ್ರೀ ವಿಜಯೀಂದ್ರಾರ್ಯಾ
ಸದ್ವೈಷ್ಣವ ಕಮಲಕೆ ಸೂರ್ಯಾ ಪ

ಮೃಡದೇವ ನಾನೆಂದು ಅಡಗಡಿಗೆ ನುಡಿಯುವ
ಕಡು ಮೂರ್ಖ ಮಾಯಿಗ್ರಂಥ

ಕಡಲ ಶೋಷಿಪದಕ್ಕೆ ಸೂರ್ಯ* ೧

ಮೂಲ ಮೂವತ್ತೇಳು ಪೇಳಿದ
ಮೂಲ ಮಧ್ವಮುನಿ
ವಾಲಗದಲ್ಲಿರೆ ಶೀಲ ಚಕ್ರವಾಕಕ್ಕೆ ಸೂರ್ಯ ೨

ಅರವತ್ತು ಮೂರೊಂದು ಬಿಂದು ವಿದ್ಯವ ತೋರ್ದ
ಪರಮ ಪುರುಷನಿಪ್ಪ ಸುರಗಿರಿ ಸುತ್ತುತಿರ್ಪ ಸೂರ್ಯ ೩

ಅಪ್ಪಯ್ಯ ದೀಕ್ಷಿತನ ತಪ್ಪು ನುಡಿಗಳನ್ನು
ಒಪ್ಪಿಸಿ ಶ್ರುತಿಯಿಂದ ಮುಖ ಕಪ್ಪು ಮಾಡಿದ ಸೂರ್ಯ ೪

ಕ್ಷೋಣಿಯೊಳ್ ವರಕುಂಭಕೋಣಿ ಸಾಗರಚಕ್ರ -
ಪಾಣಿಪದಕಂಜ ಕಾಣಿಸಿ ಕೊಡುವಂಥ ಸೂರ್ಯ ೫

ಶ್ರೀ ಜಾನಕೀಶ ಪದಾಂಬುಜ ಮಧುಪಾ ವಿ -
ರಾಜಿತ ನವಭಕ್ತ ಮನದಂಧಕಾರಕ್ಕೆ ಸೂರ್ಯ ೬

ಪಂಕಜಾಕ್ಷ ಪ್ರಸನ್ನೆಂಕಟವಿಠಲನ
ಕಿಂಕರರಿಗೆ ಭಯಂಕರ ಬಿಡಿಸುವ ಸೂರ್ಯ ೭

■ ■ ■

## ೧೧

[ರಾಗ: ಶಂಕರಾಭರಣ ಆಟತಾಳ ]

ಕರವೊಡ್ಡಿ ಬೇಡುವೆ ಗುರು ವಿಜಯೀಂದ್ರ
ನೆರೆನಂಬಿದೆ ಭಕುತನ ಕಾಯೋ ದೊರೆಯೇ ಪ.

ಕರಕರೀ ಭವಸಾಗರದೀ ಮುಳುಗುತಿಹೆ
ಪೊರೆವರಿನ್ನೊಬ್ಬರನರಿಯೇ ಗುರುವೇ ಅ.ಪ.

* ಈ ನುಡಿಯ ಮಾತ್ರೆಯ ಲೆಕ್ಕ ಸರಿಯಾಗಿಲ್ಲ

ಧರಣಿಯೊಳು ಭೂ ಸುರೋತ್ತಮರಲ್ಲಿ ಜನಿಸಿ
ಸಕ್ರಮದಿ ವಿಪ್ರತ್ವವ ವಹಿಸಿ
ಗುರು ವ್ಯಾಸಮುನಿರಾಯರ ಪಾದಕ್ಕೆರಗಿ
ಉರುಮಧ್ವಾಗಮಾರ್ಥವ ಗ್ರಹಿಸಿ
ಮರಳಿ ಎರಡು ನಾಲ್ಕು ಬಾರಿ ಶಾಸ್ತ್ರಗಳರ್ಥ ಗ್ರಹಿಸಿ
ಧಾರುಣಿಯೊಳು ಚರಿಸಿ
ಅರದೂರ ಮಾಡಿ ಪೊರೆವ ಪ್ರಭು ಸಲಹೆನ್ನ
ನಿರುತನಾನೆರಗುವೆ ನಿನ್ನ ಚರಣವ ಗ್ರಹಿಸಿ ೧

ಭಾಗವತಾಗ್ರೇಸರಗುರು ಸುರೇಂದ್ರಮುನಿ ಕರ -
ಪದುಮ ಸಂಜಾತ
ಯೋಗಿವರ್ಯರೆ! ನಿಮ್ಮ ಪಾದ ಸೇರಿದ ಜನ -
ರಘುವ ಕಳೆವ ನಿರ್ಭೀತ ||
ಭೋಗಿಭೂಷಣನೇ ಪರದೈವವೆಂಬಾ
ದುರ್ವಾದಿಗಳ ಗೆದ್ದ ಖ್ಯಾತ |
ರಾಘವೇಂದ್ರರ ಪರಮ ಗುರುವೇ ನಿಮ್ಮಯ
ಪಾದ ನೆರೆನಂಬಿಹೆ ನಿಮ್ಮ ದೂತ ೨

ಚತುರಧಿಕಶತಗ್ರಂಥ ವಿರಚಿಸಿ ದುರ್ಮತಿ
ಲಿಂಗಣ್ಣನ ಗೆದ್ದು ಮಠವ |
ಚತುರಧಿಕಷಷ್ಠಿ ವಿದ್ಯಾನಿಪುಣನೆ! ರತಿಪತಿ -
ಪಿತಗರ್ಪಿಸುವ
ಕ್ಷಿತಿಯೊಳು ಪತಿತಪಾವನ ರಘುಪತಿಯೇ
ಸರ್ವೋತ್ತಮನೆಂದು ವಾದಿಸುವ
ತತುವೇಶರ ಪತಿ-ಪಿತ (ವಿ) ಜಯಲಕ್ಷುಮೀ -
ಪತಿ-ನರಸಿಂಹನರ್ಚಿಸುವ ೩

■ ■ ■

# ೧೨

[ರಾಗ: ಕಾಂಬೋಜಿ ತಾಳ : ಝಂಪೆ]

ವಿಜಯಮೂರುತಿ ಪೊರೆಯೋ ವಿಜಯೀಂದ್ರಯತಿವರ್ಯ
ವಿಜಯನಗರೇಶನುತ ಪಾದಪಂಕಜನೇ ಪ

ಕಾವೇರಿ ತಟನಿಕಟ ಕುಂಭಕೋಣಾವಾಸಿ!
ಶೈವಯತಿಮತ್ತೇಭ ಪಂಚಾನನ ಅ.ಪ.

ಪರಮಗುರು ಶ್ರೀಮದಾನಂದತೀರ್ಥೋದ್ಯಾನ
ಪರಶಾಸ್ತ್ರವೆಂಬ ಸತ್ಸಾರಸದಿ ವಿಹರಿಸುವ
ಪರಮಹಂಸನೇ ಯಮ್ಮ ಪರಿಕಿಸದಲನವರತ
ಪರವಾದಿಜಯವೀಯೋ ನರಹರಿಯ ಪ್ರಿಯನೇ ೧

ಹತ್ತುಹತ್ತು ನಾಲ್ಕು ಸತ್ಕೃತಿಗಳನು ವಿರಚಿಸಿ
ಮಿಥ್ಯವಾದವ ಮುರಿದ ಸತ್ಯಶೀಲ ಯತೀಂದ್ರ
ಮತ್ತಕಾಶಿನಿಯರಂ ಕಣ್ಣೆತ್ತಿ ನೋಡದಲೆ
ಚಿತ್ತೇಶನಂ ಗೆಲಿದೆ ಸುತ್ತಲೂ ಕಾಯೆಮ್ಮ ೨

ಪಂಥವನು ತೊಟ್ಟು ಅಪ್ಪಯ್ಯದೀಕ್ಷಿತರೆಂಬ
ಮತ್ತವಾದಿಯ ಜಯಿಸಿ ಮಧ್ವಮತ ರಕ್ಷಿಸಿದೆ
ಪತಿತಪಾವನ ನಮ್ಮ ಕಮಲೇಶನಂಘ್ರಿಯನು
ನುತಿಸುತ್ತಲನವರತ ಭಕುತರನು ಪೊರೆಯುತಿಹೆ ೩

■ ■ ■

## ೧೩

[ಧಾಟಿ: ಯಾವ ರೀತಿಯಿಂದ ನೀ ಎನ್ನ ಸಲಹುವೆ]

ಶ್ರೀ ವಿಜಯೀಂದ್ರ ಮೌನಿಯ ಶ್ರೀ ವಾರಿಜಾಂಘ್ರಿಗಳ
ಭಾವಶುದ್ಧಿಲಿ ಭಜಿಸೋ। ನೀ ಸುಖಿಸೋ ಪ.

ಶ್ರೀ ವಿಠಲಾರ್ಯರೆಂದು ಪೂರ್ವಾಶ್ರಮದಿ । ಇವರು
ಶ್ರೀ ವ್ಯಾಸರಾಜರಲ್ಲಿ ಪವನಶಾಸ್ತ್ರವ ಕಲಿತ ಅ.ಪ.

ಕೋವಿದರ ಮಾಡಿ ಇವರ ಶ್ರೀ ವ್ಯಾಸರಾಜರು
ಶ್ರೀ ವಿಷ್ಣುತೀರ್ಥರೆಂದು ಸನ್ಯಾಸವ ನೀಡುತಾ
ಗೋವ ಕಾವನ ನೆನೆದು ಸುರೇಂದ್ರರಿಗೊಪ್ಪಿಸೆ
ತಾವ್ಪೊರಿಯೆ ಚತುಃಷಷ್ಟಿ ವಿದ್ಯದಿ ರಾಜಿಸಿದಾ ೧

ಉಭಯ ಗುರ್‍ವಾಜ್ಞೆಯಲಿ ಕುಂಭಕೋಣಕೆ ಬಂದು
ಪ್ರಭುಗಳು ಎಮ್ಮೆ ಬಸವನ ಗರ್ವ ಮುರಿದು
ಪ್ರಬಲಪ್ಪಯ್ಯದೀಕ್ಷಿತನ ಮಧ್ವಮತ ವಿಧ್ವಂಸಕನ
ಶುಭರಹಿತ ಮಧ್ವತಂತ್ರಮುಖಮರ್ದನ ಗ್ರಂಥ ಮುರಿದ ೨

ಅರವತ್ತೆರಡೂ [೬೪?] ಕಲೆಯರಿತಪ್ಪಯ್ಯ ದೀಕ್ಷಿತನು
ನಿರುತ ಕೆಣ್ಕಲವನ ಬಿಡದೋಡಿಸುತಲಿ
ಹಿರಿದಾಗಿ ಮೆರೆದಂಥ ವೈಯ್ಯಾಕರಣ ಭಟ್ಟೋಜಿಯ
ಮುರಿದು ತತ್ವಕೌಸ್ತುಭ ಜಯಪತ್ರಗೊಂಡಂಥ ೩

ಎಲ್ಲಾ ಮತೀಯರು ಎಲ್ಲಾ ಕಲೆ ನಿಪುಣರು
ಅಲ್ಲಲ್ಲಿ ಇವರನ್ನು ಪರಿಕಿಸಿ ಜಯಪತ್ರವಾ
ನಿಲ್ಲದೆ ನಮಿಸೀಯೆ ನೂರನಾಲ್ಕು ಗ್ರಂಥ
ಸಲ್ಲಲಿತವಾಗಿ ರಚಿಸಿ ಬಿಲ್ವಾರಿಗರ್ಪಿಸಿ ೪

ರಾಮ್ರಾಯ ಭೂಪಾಲ್ನ ಶ್ರೀವಿಜಯನಗರಕ್ಕೆ
ಪ್ರೇಮದಾಹ್ವಾನದಿ ಸಂಸ್ಥಾನದೊಡೆ ಪೋಗಲೂ
ಹೇಮಪಾಲಕಿಯಲ್ಲಿ ಇವರನ್ನು ಬರಮಾಡಿ
ತಾ ಮುದದಿ ನವರತ್ನ ಗೈದಭಿಷೇಕಗೊಂಡ ೫

ಸಾರಂಗಪಾಣಿಯ ದೇವಾಲಯ ಕಲಶದಿಂದ
ನಾರೆ ಬಾಳೆಲಿ ನಡೆದು ಕುಂಭೇಶ್ವರ ಗುಡಿ ಕಲಶಕ್ಕೆ
ಧೀರರಿವರು ದಿವ್ಯ ಭಾರಿ ಕೌತುಕ ತೋರುತ
ಸಾರಿ ಬಂದ ನಿಪುಣರ ಓಡಿಸಿದ ಮಹಿಮರೆ ೬

ಸರಸೀಗೆ ದ್ವೈತಾದ್ವೈತಾ ಎರಡೂ ಪಕ್ಷದ ನ್ಯಾಯಕೆ
ಮರು ಉದಯದಿ ನೋಡೆ ದೊರೆ ಹೆಚ್ಚಿನ ಚಿನ್ನಾಕೆನ್ನೆ
ಆ ರಾತ್ರಿ ದುರ್ಮತಿಗಳ್ಸರಸೀಲಿ ಲಿಂಗ ತುಂಬೆ
ಶೂರರಿವರು ಜಪಿಸಿ ತೋರೆ ಹನುಮನೆ ಕಂಡ ೭

ಕಡಗೋಲ ಕೃಷ್ಣನ ಉಡುಪೀಲಿ ದರ್ಶಿಸೀ
ಸಡಗರದಿ ರಚಿಸೀದ ಗ್ರಂಥ ರತ್ನಾದಿಗಳಾ
ಅಡಿಗಳಿಗರ್ಪಿಸೆ ಒಡನಾಡಿದ ವಾದಿರಾಜರು
ಕೊಡೆ ಮಠವಗೊಂಡು ಕಡು ಮನ್ನಣೆಗೊಂಡಾ ೮

ಸುರೇಂದ್ರರಾಜ್ಞೆಯಲಿ ಸುಧೀಂದ್ರರಿಗಾಶ್ರಮ
ಹರುಷದಿ ಹಿಂದೆ ಇತ್ತು ವರ ವಿದ್ಯೆಗಳ ಬೋಧಿಸಿದ
ಕರೆದಿವರ ಸಂಸ್ಥಾನ ಭರದಿ ಶಿಷ್ಯರಿಗಿತ್ತು
ಸಿರಿ ಲಕುಮೀಶ್ನ ಧ್ಯಾನದಿ ಕುಂಭಕೋಣದಿ ಮೆರೆವಾ ೯

■ ■ ■

# ೬. ಶ್ರೀ ಸುಧೀಂದ್ರತೀರ್ಥರು

(೧೬೧೪-೧೬೨೧)

ಶ್ರೀ ಸುರೇಂದ್ರರು ಬದುಕಿ ಇದ್ದಾಗಲೇ ನಾರಾಯಣಾಚಾರ್ಯ ಎನ್ನುವ ತರುಣರಿಗೆ ಆಶ್ರಮವಿತ್ತು ಸುಧೀಂದ್ರತೀರ್ಥರೆಂದು ನಾಮಕರಣ ಮಾಡಿದ್ದರು. ಮತ್ತು ಶ್ರೀ ವಿಜಯೀಂದ್ರರಿಗೆ "ನಿಮ್ಮ ನಂತರ ಇವರಿಗೆ ಪಟ್ಟ ಸಲ್ಲಬೇಕು" ಎಂದು ಸಲಹೆ ಮಾಡಿದ್ದರು. ಪರಿಣಾಮವಾಗಿ ಶ್ರೀ ಸುಧೀಂದ್ರತೀರ್ಥರು ಅವರಲ್ಲಿಯೇ ಶಾಸ್ತ್ರಾಭ್ಯಾಸ ಮಾಡಿ ಗುರುಗಳ ಜೊತೆಗೇ ಹೆಚ್ಚಾಗಿ ಸಂಚಾರ ಮಾಡುತ್ತಿದ್ದಿರಬೇಕು. ಹೀಗಾಗಿ ತಮ್ಮ ಗ್ರಂಥಗಳಲ್ಲಿ ಶ್ರೀ ವಿಜಯೀಂದ್ರರನ್ನು ಅವಕಾಶ ದೊರೆತಾಗ ಮನಸಾರೆ ಹೊಗಳಿದ್ದಾರೆ. ಗುರು ಋಣವನ್ನೂ ಮುಕ್ತವಾಗಿ ಸಲ್ಲಿಸಿದ್ದಾರೆ. ತರುಣ ವಯದಲ್ಲಿ ಶ್ರೀ ಸುಧೀಂದ್ರರು ಶ್ರೀ ವಾದಿರಾಜರೊಂದಿಗೆ ಆತ್ಮೀಯ ವಾತ್ಸಲ್ಯದ ಸಂಬಂಧ ಹೊಂದಿದ್ದರು. ಇದಕ್ಕೆ, ಅವರು ರಚಿಸಿದ ( ಕೋವಾರ್ಥಾಂಗಂ ... ಇ. ) ವಾದಿರಾಜ ಸ್ತುತಿಪರ ಸ್ತೋತ್ರವನ್ನು ಗಮನಿಸಬಹುದು:

ತಮ್ಮ ಗುರುಗಳಂತೆ ಸುಧೀಂದ್ರಯತಿಗಳು ಎಲ್ಲ ಶಾಸ್ತ್ರಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ರಚಿಸಿದ್ದಾರೆ. ಕಾವ್ಯ ನಾಟಕ ಗ್ರಂಥಗಳೂ ಅವರಿಂದ ರಚಿತವಾಗಿವೆ. ಅವುಗಳಲ್ಲಿ ಶಾಸ್ತ್ರ ಗ್ರಂಥಗಳೆಂದು ತರ್ಕತಾಂಡವ ವ್ಯಾಖ್ಯಾ, ಭಾಗವತದ ಕೆಲವು ಸ್ಕಂದಗಳಿಗೆ ಟಿಪ್ಪಣಿ - ಇವನ್ನೂ ಹೆಸರಿಸಬೇಕು. ಸಾಹಿತ್ಯ ಗ್ರಂಥಗಳೆಂದು ವ್ಯಾಸರಾಜಾಭ್ಯುದಯ, ದಯಾಲುಶತಕ, ಸುಭದ್ರಾ ಪರಿಣಯ ನಾಟಕ - ಇವು ಕೆಲವು ಉಲ್ಲೇಖನೀಯವಾಗಿವೆ. ಈ ಕಾವ್ಯ ನಾಟಕಗಳಿಂದಾಗಿ ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಇವರಿಗೆ ಅವಶ್ಯವಾಗಿ ಸ್ಥಾನ ಸಲ್ಲಬೇಕಾಗಿದೆ.

ಸುಭದ್ರಾಪರಿಣಯ ನಾಟಕದ ಬಂಧವು ಪ್ರೌಢವಾದುದು. ಅರ್ಜುನನ ಸನ್ಯಾಸಿಯ ವೇಷ ಮುಂತಾದ್ದರಲ್ಲಿ ಮಾರ್ಪಾಟನ್ನು ಮಾಡಿಕೊಂಡಿದ್ದಾರೆ. ಇದೊಂದು ರಸಭರಿತವಾದ ನಾಟಕ. 'ಅಲಂಕಾರ ಮಂಜರಿ' ಎಂಬ ಗ್ರಂಥದಲ್ಲಿ ಅಲಂಕಾರಗಳಿಗೆ ಕೊಟ್ಟ ಲಕ್ಷ್ಯ ಪದ್ಯಗಳಲ್ಲಿ ವಿಜಯೀಂದ್ರರ ಸ್ತೋತ್ರವೇ ಮೂಡಿಬಂದಿದೆ. ಕೃಷ್ಣಯಜ್ವ ಎಂಬ ವೃದ್ಧ ಕವಿ 'ರಘುನಾಥ ಭೂಪಾಲೀಯ' ಎಂಬ ಕಾವ್ಯ ರಚಿಸಿದ್ದ. ಈತ ತಂಜಾವೂರಿನ 'ರಘುನಾಥ ಭೂಪಾಲ'ನೆಂಬ ವಿದ್ವಾಂಸ ಅರಸನ ಆಸ್ಥಾನದಲ್ಲಿದ್ದವ. ಅವನು ಶ್ರೀಗಳವರ ಬಳಿಗೆ ಬಂದು 'ತಾವು ಇದಕ್ಕೆ ವ್ಯಾಖ್ಯಾನ ಬರೆದು' ತನ್ನ ಕೃತಿಗೂ ಅದರ ಕಥಾನಾಯಕನಿಗೂ ಗೌರವ ತಂದುಕೊಡಬೇಕೆಂದು ಪ್ರಾರ್ಥಿಸಿದ. ಶ್ರೀಗಳವರು ಆ ನಿಮಿತ್ತದಿಂದ ಸಂಸ್ಕೃತ ಅಲಂಕಾರ ಶಾಸ್ತ್ರದ ಎಲ್ಲ ವರಸೆಗಳನ್ನು ಅದರಲ್ಲಿ ತಂದು ವಿವರವಾದ ವ್ಯಾಖ್ಯಾನ ಬರೆದಿದ್ದಾರೆ.

ಶ್ರೀಗಳವರು ಹಲವಾರು ರಾಜರುಗಳಿಂದ ಸನ್ಮಾನಿತರಾದವರು. ಸಣ್ಣ ಪುಟ್ಟ ನಾಯಕರೂ ರಾಜಮನ್ನಣೆ ಇತ್ತು, ಜಹಗೀರುಗಳನ್ನು ದಾನವಾಗಿ ಇತ್ತಿದ್ದಾರೆ. ಈ ಹಿಂದೆ ಹೇಳಿದ ಚೇವಪ್ಪನಾಯಕನು ಶ್ರೀ ಸುಧೀಂದ್ರರನ್ನು ವಿಶೇಷ ಗೌರವದಿಂದ ಸನ್ಮಾನಿಸಿದನು. ಪೆನುಗೊಂಡೆಯ ಶ್ರೀರಂಗನಾಯಕನು ಇದೇ ರೀತಿಯಲ್ಲಿ ಮರ್ಯಾದೆ ಸಲ್ಲಿಸಿ, ಹಲವಾರು ಗ್ರಾಮಗಳನ್ನು ದತ್ತಿ ಬಿಟ್ಟಿದ್ದಾನೆ. ಚಿಂಜಿಯ ಭೂಪತಿಯು ಗ್ರಾಮಗಳನ್ನು ದತ್ತಿ ಬಿಟ್ಟದ್ದು ಶಾಸನಗಳಲ್ಲಿಯೇ ಉಕ್ತವಾಗಿದೆ.

ಸಂಚಾರತ್ವೇನ ಶ್ರೀ ಸುಧೀಂದ್ರರು ಒಮ್ಮೆ ವಿಜಾಪುರಕ್ಕೆ ಬಂದರು. ಆ ಪ್ರದೇಶವು ಭೀಕರ ಬರಗಾಲದಿಂದ ತತ್ತರಿಸಿದ್ದಿತು. ಶ್ರೀಗಳ ಕೃಪೆಯಿಂದ ಮಳೆಯಾಯಿತೆಂಬ ಐತಿಹ್ಯವಿದೆ. ಅಲ್ಲಿಯ ಸ್ಮಾರ್ತ ದಿವಾನನು ಆ ಮುಂದೆ ಇವರಿಗೆ ಪರಮ ಶಿಷ್ಯನಾಗಿ ಉಳಿದನು. ಇದರಂತೆ ಇನ್ನೂ ಹಲವು ಜನ ಲೌಕಿಕರು ಶ್ರೀಗಳವರ ಕೃಪೆಗೆ ಪಾತ್ರರಾಗಿ ಭಾಗ್ಯಶಾಲಿಗಳಾದರೆಂದು ತಿಳಿದು ಬರುತ್ತದೆ. ಇಲ್ಲಿಯ ಒಂದು ಕೀರ್ತನೆಯಲ್ಲಿ ಬಂದಿರುವ ಪ್ರಕಾರ, ಸುಪ್ರಸಿದ್ಧ ಶ್ರೀ ಯಾದವೇಂದ್ರತೀರ್ಥರೂ ಇವರಿಂದ ಗುರೂಪದೇಶ - ದೀಕ್ಷೆ ಪಡೆದವರೆಂದು ತಿಳಿಯುತ್ತದೆ.

ಅದೇನಿದ್ದರೂ ಮಹಾಮಹಿಮ ಶ್ರೀ ರಾಘವೇಂದ್ರರಿಗೆ ಗುರುಸ್ಥಾನದಲ್ಲಿದ್ದು ಅವರಿಂದ ಹೊಗಳಿಸಿಕೊಂಡಿರುವರೆಂಬುದಷ್ಟೇ ಸಾಕು, ಶ್ರೀ ಸುಧೀಂದ್ರರ ಮಹಿಮಾ ವಿಶೇಷಕ್ಕೆ. ಆಮೇಲೆ ಬಂದ ಶ್ರೀ ಸುಮತೀಂದ್ರರಂತಹವರು ಇವರ ಕೃತಿಗಳ ಮೇಲೆ ವ್ಯಾಖ್ಯಾನ ಟಿಪ್ಪಣಿಗಳನ್ನು ರಚಿಸಿದ್ದಾರೆ - ಎನ್ನುವುದೂ ಗಮನಾರ್ಹವಾದದ್ದು.

■ ■ ■

## ೧೪

[ರಾಗ: ........]

**ಶ್ರೀ ಸುಧೀಂದ್ರತೀರ್ಥ ಯತಿರಾಜರ ಚರಣ**
ಬಿಸಜದ್ವಂದ್ವದಲಿ ನಾ ಶರಣಾದೆ ಸತತ
ಅಸಮ ಗುಣವಾರಿನಿಧಿ ಶ್ರೀ ರಾಮಚಂದ್ರ
ವ್ಯಾಸ ನರಹರಿ ಕೃಷ್ಣಸ್ಯೆಂಧವಾಸ್ಯ ಪ್ರಿಯ ೧

ತೋಯಜೇಕ್ಷಣ ನಾರಾಯಣ ಲಕ್ಷ್ಮೀಗೆ
ಮುಖ್ಯ ವಾಯುಗೆ ಭಾರತಿಗೆ ಪ್ರಿಯತಮರು
ಜಯಶೀಲ ವಿಜಯೀಂದ್ರತೀರ್ಥರ ಕರದಿಂದ
ಅಭ್ಯುದಯರಾದರು ಸುಧೀಂದ್ರ ಯತಿವರರು ೨

ಶ್ರೀ ಸುರೇಂದ್ರರಿಗು ಶ್ರೀ ವ್ಯಾಸರಾಜರಿಗು
ಈ ಸಾಧು ವಿಪ್ರನು ಪ್ರಿಯತರನಾಗಿದ್ದ
ಶ್ರೀ ಸುರೇಂದ್ರರು ಹೇಳಿ ಶ್ರೀ ವಿಜಯೀಂದ್ರರು
ನಿಶ್ಚಯಿಸಿದರು ಸಂಸ್ಥಾನಕ್ಕೆ ಈ ವಿಪ್ರನನ್ನ ೩

ಶ್ರೀ ವಿಜಯೀಂದ್ರರನುಗ್ರಹ ಪೂರ್ಣಪಾತ್ರರು
ದೇವತಾಂಶರು ಶ್ರೀ ಸುಧೀಂದ್ರಯತಿಯ
ದಿಗ್ವಿಜಯದಲಿ ಇವರ ಮಹಿಮೆಗಳ ಕಂಡು
ಸರ್ವರು ಎಲ್ಲೆಲ್ಲು ಮಾಡಿದರು ಮರ್ಯಾದೆ ೪

ಪೆನುಕೊಂಡ ಅಧಿಪತಿ ವೇಂಕಟರಾಯ
ರತ್ನಾಭಿಷೇಕ ಅನೇಕ ಸಲ ಮಾಡ್ದ
ರಘುನಾಥರಾಜನು ತಂಜಾವೂರಧಿಪ
ಕನಕಾಭಿಷೇಕಗಳ ಮಾಡಿದನು ಇವರಿಗೆ ೫

ಸುಭದ್ರಾಪರಿಣಯದ ಸೊಬಗು ಬಹು ರಸತರವು
ಈ ಭಾರಿ ಕವಿಗಳ ಸಾಮರ್ಥ್ಯ ಏನೆಂಬೆ
ಗಂಭೀರ ಧಾಟಿಯಲಿ ವ್ಯಾಸರಾಜಾಭ್ಯುದಯ
ಸದ್ಭಕ್ತಿ ವೈರಾಗ್ಯ ಬೋಧಿಪ ಗ್ರಂಥಗಳು ೬

ವ್ಯಾಖ್ಯಾನ ಮಾಡಿಹರು ಶ್ರೀ ಭಾಗವತದ
ಏಕಾದಶ ಸ್ಕಂದ ದ್ವಿತೀಯ ಸ್ಕಂದ
ತರ್ಕತಾಂಡವಕೆ ವ್ಯಾಖ್ಯಾನ ಇನ್ನು ಬಹು
ಅಲಂಕಾರಮಂಜರಿಯಾದಿ ಗ್ರಂಥಗಳು ೭

ಪೂರ್ವಾಶ್ರಮದಲ್ಲಿ ಸುಧೀಂದ್ರ ತೀರ್ಥರು
ಶ್ರೀ ವಿಜಯೀಂದ್ರರಲಿ ವಿದ್ಯೆ ಕಲಿತಂತೆ
ದೇವಸ್ವಭಾವದ ವಿಪ್ರನೋರ್ವನು
ಸೇವಿಸಿ ಸುಧೀಂದ್ರರಲಿ ವಿದ್ಯೆ ಕಲಿತ ೮

ಆ ದ್ವಿಜನ ಯೋಗ್ಯತೆಯು ಬಲು ಭಾರಿ ಎಂದರಿತು
ಶ್ರೀ ಸುಧೀಂದ್ರರು ಅವಗೆ ತುರೀಯಾಶ್ರಾಮವ -
ನಿತ್ತು ಶ್ರೀ ಯಾದವೇಂದ್ರತೀರ್ಥ ನಾಮವನು
ಮಂತ್ರಪ್ರಣವಾದಿ ಉಪದೇಶ ಮಾಡಿದರು ೯

ಸುಧೀಂದ್ರ ಗುರುಗಳಲಿ ಪಾಠ ಓದುವುದಕ್ಕೆ
ಬಂದಿದ್ದರು ವೆಂಕಟನಾಥಾಚಾರ್ಯರು
ಸಾಧು ಧೀಮಂತರು ವಿನಯ ಸಂಪನ್ನರು
ಶ್ರೀದನಿಗೆ ಪ್ರಿಯತಮರು ಭಕ್ತ ವಿಜ್ಞಾನಿ ೧೦

ರಾಘವನ ಪ್ರೇರಣೆಯಿಂ ಸನ್ಯಾಸವನ್ನಿತ್ತು
ರಾಘವೇಂದ್ರತೀರ್ಥಾಖ್ಯ ನಾಮವನು ಕೊಟ್ಟು
ಮುಖ್ಯ ವಿದ್ವಜ್ಜನ ಭೂಪಾಲರ ಮುಂದೆ
ಶಂಖದಿ ಸುಧೀಂದ್ರರಭಿಷೇಕ ಮಾಡಿದರು ೧೧

ತುಂಗಾನದಿಯಲ್ಲಿ ವೃಂದಾವನಂಗಳು
ಪಂಕಜನಾಭರು ನರಹರಿ ಕವೀಂದ್ರ
ವಾಗೀಶರು ವ್ಯಾಸರಾಯರಿಹರು
ತಾವ್ ಕುಳಿತರಲ್ಲೇವೆ ಶ್ರೀ ಸುಧೀಂದ್ರಾರ್ಯ ೧೨

ಪದುಮಭವಪಿತ ಶ್ರೀ ಪದುಮಾಲಯಾಪತಿ
ನಿರ್ದೋಷ ಗುಣನಿಧಿ ಪ್ರಸನ್ನಶ್ರೀನಿವಾಸ
ಯದುಪತಿಗೆ ಪ್ರಿಯತರ ಸುಧೀಂದ್ರ ಗುರುವರ ನಿಮ್ಮ
ಪದುಮಾಂಘ್ರಿ ಯುಗ್ಮದಲಿ ಶರಣು ಮಾಂ ಪಾಹಿ ೧೩

[ಸಂಗ್ರಹ]

# ೭. ಶ್ರೀ ರಾಘವೇಂದ್ರತೀರ್ಥರು

(೧೬೨೧-೧೬೭೧)

'ಗುರುಸಾರ್ವಭೌಮರು', 'ರಾಯರು' ಮತ್ತು 'ಕಲಿಯುಗದ ಕಲ್ಪತರು' ಈ ಮೂರು ವಿಶೇಷಣಗಳು ಶ್ರೀ ರಾಘವೇಂದ್ರಯತಿಗಳ ವ್ಯಕ್ತಿತ್ವವನ್ನು ಸ್ಪಷ್ಟವಾಗಿ ರೂಪಿಸಬಲ್ಲುವು. ಅದೆಷ್ಟೋ ಜನ ಗುರುಗಳು ಆಗಿ ಹೋಗಿದ್ದರಲ್ಲಿ ಇವರು ಸಾರ್ವಭೌಮ ಸ್ಥಾನದಲ್ಲಿದ್ದವರು. ಇನ್ನು 'ರಾಯರು' ಎನ್ನುವ ಪದವು ಅವರು ಲಕ್ಷಾಂತರ ಸಾಮಾನ್ಯ ಜನರ ಹೃದಯಕ್ಕೆ ಹತ್ತಿರದ ಆತ್ಮೀಯರು ಎನ್ನುವುದನ್ನು ಧ್ವನಿಸುತ್ತದೆ. ಅದರಂತೆ ಜಾತಿ ಮತ ಭೇದವಿಲ್ಲದೆ ಭಕ್ತಿಯಿಂದ ಸೇವಿಸಿದವರ ಪಾಲಿಗೆ 'ಕಲ್ಪತರು'ವಾಗಿ ಇಂದಿಗೂ ಕಾಣಿಸಿಕೊಂಡಿದ್ದಾರಲ್ಲವೆ.

ಈ ವಿಶಿಷ್ಟತೆಗಳಿಂದಾಗಿ, ಕವನಿಸ ಒಲವಿರುವ ಅನೇಕರು ಅವರನ್ನು ಸ್ತುತಿಸಿದ್ದಾರೆ. ಅವರುಗಳಲ್ಲಿ ಅನ್ಯ ಮತ-ಪಂಥೀಯರೂ ಇದ್ದಾರೆ. (ಉದಾ:ಗೆ ಆಸೂರಿ ರಾಮಸ್ವಾಮಯ್ಯಂಗಾರರು). ಮಾತ್ರವಲ್ಲ, ಅವರ ಸ್ತುತಿಪರ ಕೀರ್ತನೆಗಳನ್ನು ವಿವಿಧ ಸಂದರ್ಭ ಸಮಾರಂಭಗಳಲ್ಲಿ ಹಾಡುವವರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಲಿದೆ. ಇಂಥ ಮಹಾನುಭಾವರನ್ನು ನೆನೆಯುವುದು, ನಮನ ಸಲ್ಲಿಸುವುದೆಂದರೆ ನಮ್ಮ ಪುಣ್ಯ ವಿಶೇಷವೇ ಸೈ.

ಶ್ರೀ ರಾಘವೇಂದ್ರರನ್ನು ಕುರಿತ ಹಾಡುಗಳು ನಾಲ್ಕು ನೂರರಷ್ಟು ಇದ್ದಿರಲು ಸಾಕು - ಇಷ್ಟರ ಮಟ್ಟಿಗಿನ ಪ್ರಾಚುರ್ಯ ಬೇರಾವ ಯತಿಗಳ ಬಗೆಗೂ ಇಲ್ಲ. ಅವರ ಸ್ತುತಿಪರ ಹಾಡುಗಳ ಹಲವಾರು ಸಂಕಲನಗಳು ಈಗಾಗಲೇ ಪ್ರಕಟವಾಗಿವೆ. (ಉದಾ:ಗೆ ಮಂತ್ರಾಲಯದ ಸಂಸ್ಕೃತ ವಿದ್ಯಾಪೀಠದವರು ಹೊರತಂದ 'ಹರಿದಾಸರು ಕಂಡ ಶ್ರೀ ಗುರು ಸಾರ್ವಭೌಮರು' ಎಂಬುದರಲ್ಲಿ ೬೨ ಜನ ಹರಿದಾಸರು ರಚಿಸಿದ ೨೪೧ ಕೀರ್ತನೆಗಳಿವೆ.)

ಆದರೆ ಈ ಯತಿವರೇಣ್ಯರನ್ನು ಕುರಿತು ಯತಿಗಳೇ ರಚಿಸಿದ ನಾಲ್ಕು ಹಾಡುಗಳಿವೆ. ಒಬ್ಬರು ಸೋದೆ ಮಠದ ಶ್ರೀ ವಿಶ್ವೇಂದ್ರ ತೀರ್ಥರು. (೧೮೯೬ - ೧೯೪೩). ಸೋದೆ ಹಾಗೂ ಮಂತ್ರಾಲಯ ಮಠಗಳ ಸೌಹಾರ್ದ ಸಂಬಂಧ ಶ್ರೀ ವಾದಿರಾಜ - ಶ್ರೀ ವಿಜಯೀಂದ್ರರ ಕಾಲದಿಂದಲೇ ಇದ್ದದ್ದು. ಪ್ರಕೃತ ಅಪೂರ್ವವಾದ ಆ ಕೀರ್ತನೆಯನ್ನು ಇಲ್ಲಿ ಕೊಡಮಾಡಿದೆ. ಇನ್ನು ಇಬ್ಬರು ಶ್ರೀ ವ್ಯಾಸರಾಯ ಮಠದ ಶ್ರೀ ವಿದ್ಯಾರತ್ನಾಕರರು ಹಾಗೂ ಶ್ರೀ ವಿದ್ಯಾಪ್ರಸನ್ನತೀರ್ಥರು. ನಾಲ್ಕನೆಯವರು ಸಾಗರಕಟ್ಟೆಮಠದ ಶ್ರೀ ಪ್ರದ್ಯುಮ್ನತೀರ್ಥರು. ಇವಿಷ್ಟನ್ನೂ ಇಲ್ಲಿ ಪೋಣಿಸಲಾಗಿದೆ.



## ೧೫

### [ರಾಗ: ರೀತಿ ಗೌಳ ಆದಿತಾಳ]

ರಾಘವೇಂದ್ರ ಸಲಹೋ ಗುಣಸಾಂದ್ರ ಪ

ಭಗವದ್ಗೀತಾವಿವರಣ ತಂತ್ರದೀಪ
ನಿಗಮತತಿಗೆ ಖಂಡಾರ್ಥವ ರಚಿಸಿ
ಋಗರ್ಥಗಳನು ಅತಿಸ್ಫುಟವಾಗಿ ವಿವರಿಸಿ
ಖಗವಾಹನನ ತೋಷಪಡಿಸಿದ ಧೀರ ೧

ಧರಣಿ ದಿವಿಜರಿಗೆ ವರಗಳ ಕೊಡುವಂಥ
ಸುರತರುವೇ ನಿನಗೆ ಕರಗಳ ಮುಗಿದು
ಪರಮಪುರುಷ ಹರಿಚರಣಕಮಲದಲಿ
ಸ್ಥಿರವಾದ ಭಕುತಿಯ ಬೇಡುವೆ ಧೀರ ೨

ಚಂಡಕುಮತಗಳ ಖಂಡಿಸಿ ಬುಧಜನ
ಮಂಡಲದೊಳಗೆ ಪ್ರಚಂಡನೆಂದೆನಿಸಿ
ಕುಂಡಲಿಶಯನ ಪಾದ ಮಂಡಿತ ಹೃದಯ ಭೂ -
ಮಂಡಲದೊಳಗೆ ಅಖಂಡಲನಾದ ೩

ಶ್ರದ್ಧೆಯಿಂದಲಿ ವರಮಧ್ವಾಚಾರ್ಯರ ಮತ
ಪದ್ಧತಿ ಬಿಡದಂತೆ ಬುದ್ಧಿಯನಿತ್ತು
ಉದ್ಧರಿಸಯ್ಯ ಕೃಪಾಬ್ಧಿಯೇ ಬುಧಜನಾ -
ರಾಧ್ಯಚರಣ ಪರಿಶುದ್ಧ ಚರಿತ್ರ ೪

ಕಾಮಜನಕನಾದ ನಾಮಗಿರೀಶ್ವರ
ಸ್ವಾಮಿ ನೃಹರಿ ಪಾದ ತಾಮರಸಂಗಳ
ಪ್ರೇಮದಿ ಪೂಜಿಸೆಂಬೋ ಕಾಮಿತ ವರ ನೀಡೊ
ಶ್ರೀ ಮತ್ಸುಧೀಂದ್ರಕರತಾಮರಸಭವನೇ ೫

## ೧೬

[ ರಾಗ : ಹಿಂದೂಸ್ಥಾನಿ ಕಾಪಿ ತಾಳ : ಝಂಪೆ ]

ವರ ಮಂತ್ರಾಲಯದೊಳು ಘನವಾಗಿ ನೆಲಸಿರ್ಪ
ಪರಮ ಸದ್ಗುರುವರ್ಯ ಶ್ರೀ ರಾಘವೇಂದ್ರ ಪ

ಭುವನಾದ್ರಿಯೊಳಗುದಭವಿಸುತ್ತ ರವಿಯಂತೆ
ತವಕದಿಂ ದಿನದಿನವು ತೇಜವನು ಬೆಳಗುವಿ ೧

ನರನಂತೆ ಮೆರೆಯುವ ಜಯಮುನಿಕೃತ ಶಾಸ್ತ್ರ
ಪರಿಮಳವನು ನೀನು ಪಸರಿಸಿದೆಯಲ್ಲವೆ ೨

ಮಧ್ವಮತವೆಂಬ ದುಗ್ಧಸಾಗರದೊಳು
ಉದ್ಭವಿಸಿದ ಪೂರ್ಣ ಹಿಮಕರ ತೇಜ ೩

ಅಸುರನಂದನನಾಗಿ ನರಹರಿಯನೆ ಕಂಡ
ವ್ಯಾಸರಿವರು ಸಿರಿಗುರು ರಾಘವೇಂದ್ರ ೪

ರಾಜೇಶಹಯಮುಖ ಭಜಕರೊಳಗೆ ನೀನು
ರಾಜಿಪ ಸುರತರುವಂತಿರ್ಪ ಗುರುವೆ ೫

■ ■ ■

## ೧೭

[ ರಾಗ: ಶಹನ ಆದಿತಾಳ ]

ಯತಿವರ ನಿಮ್ಮನು ಸ್ತುತಿಪ ಜನರು ದಿವ್ಯ
ಗತಿಯನು ಪೊಂದುವರು ರಾಘವೇಂದ್ರ ಪ.

ಕ್ಷಿತಿಯೊಳಗೆ ದಶಪ್ರಮತಿಗಳ ಸುಖಕರ
ಮತದ ಪರಮ ಸಂಗತಿಗಳ ಹರಡಿದ ಅ.ಪ.

ಜಯಮುನಿಗಳ ಗ್ರಂಥಗಳಿಗೆ ಸುಖ-
ಮಯ ಟಿಪ್ಪಣಿಗಳನು ರಚಿಸಿ ಚಿನ್-
ಮಯರಾಮರ ಸೇವೆಯ ಸಂತಸದಲಿ
ಗೈದು ಸುಮಂತ್ರಾಲಯದಲಿ ನೆಲಿಸಿದ ೧

ಮಂಗಳಕರವಾದ ತುಂಗಾನದಿಯ ತ-
ರಂಗಗಳಲಿ ಮಿಂದು ನಿಮ್ಮನು
ಕಂಗಳಿಂ ನೋಡಿ ಗುಣಂಗಳ ಪಾಡಿ ನಿ-
ಸ್ಸಂಗರಾದ ಸಾಧು ಸಂಘವ ಪೊರೆಯುವ ೨
ಪರಿಪರಿಯಿಂದಲಿ ನಿಮ್ಮ ನಮಿಪ ಸೇವಕರಿಗೆ
ಸುರಧೇನುವಿನಂತೆ ಸಂತತ
ಹರುಷದಿಂದಲಿ ನಿಮ್ಮ ಭಜಿಪ ಸುಜನರಿಗೆ
ಸುರತರುವಂತೆ ಪ್ರಸನ್ನರಾಗುವಂಥ ೩

■ ■ ■

## ೧೮

**ಕರುಣಿಸೊ ಶ್ರೀ ಗುರುರಾಜಾ**
ಬರದ್ಯಾಕೆ ಯೆನ್ನೊಳು ದಯಾ ಪ

ದಯಮಾಡೋ ಶ್ರೀ ಗುರುರಾಜಾ
ಹಯವದನನನಿಗತಿ ಪ್ರೀಯ ಅ.ಪ.

ವಲಿಸಾದೆ ವಿದ್ಯಗಳನ್ನು
ಬಾಳತನದಲಿ ಬಹುಕಾಲ ಕಳೆದೆ
ಕುಲೀಲೆಗಳಲ್ಲಿ ಛಲವ್ಯಾಕೆ ಯೆನ್ನೊಳು ಬಲ್ಲಿ ೧

ಜ್ಞಾನರಹಿತ ಪ್ರಾಯದಿ ನಾ
ಮಾನಾಪೇಕ್ಷೆಯನೆ ಮಾಡಿ
ಮೌನವೇಷವನೆ ಧರಿಸಿ ಹೀನಾಚರಣೆಯಲ್ಲಿರುವೆ ೨

ಪತಿತಾಗ್ರಣಿಯು ನಾ ಬಲ್ಲೆ
ಪತಿತಪಾವನ ನೀ ಬಲ್ಲೆ
ಗತಿಪ್ರದ ಮತಿಯನಿತ್ತು ರತಿಪಿತನ ತೋರಿ ೩

ಬಲ್ಲವರನು ರಕ್ಷಿಪುದೂ
ಅಲ್ಲಿ ಬಿರುದು ಘನವಾದ್ದು
ಅಲ್ಪಾನ್ನ ಪೊರೆಯಲು ನಿನಗೆ ಒಳ್ಳೆ ಕೀರುತಿ ಬರುವೂದು ೪

ಸರ್ವಜ್ಞ ನಿನಗೆ ನಾನೆಂತೊ ಪೂರ್ವಿ ಭಾರನು ನಾ ಪೇಳ್ವೆ
ಪರ್ವ ಪಂಚಕಗಳ ಕಳೆ ಶ್ರೀ ನರಹರಿಯನೆ ಪೊಂದಿಸಿ ೫



## ೮. ಶ್ರೀ ಯೋಗೀಂದ್ರತೀರ್ಥರು

(೧೬೭೧ - ೧೬೮೮)

ಪೂರ್ವದಲ್ಲಿ ವೆಂಕಣ್ಣನೆಂದೇ ಇವರ ಹೆಸರು ಇದ್ದಿತು. ಪಾವೆಯಲ್ಲಿ ಶ್ರೀ ರಾಘವೇಂದ್ರ ತೀರ್ಥರ ಅಣ್ಣನ ಮೊಮ್ಮಗ. ತಮ್ಮ ಅನಂತರದ ಸ್ಥಾನಕ್ಕೆ ಇವರನ್ನು ಆಯ್ದುಕೊಂಡದ್ದು, ವೆಂಕಣ್ಣ ಅವರ ವಿದ್ವತ್ತಿನ ಸಾಮರ್ಥ್ಯದ ದ್ಯೋತಕವಾಗಿದೆ.

ಶ್ರೀ ಯೋಗೀಂದ್ರರನ್ನು ಕುರಿತಿರುವ ಜೊತೆಗಿನ ಕೀರ್ತನೆಯಿಂದ ಅವರ ಆಳ್ವಿಕೆಯ ಕಾಲದ ಈ ಕೆಲವು ಸಂಗತಿಗಳು ತಿಳಿದು ಬರುತ್ತದೆ. ಹೈದರಾಬಾದಿನ ಕಾಕಾಶಾಸ್ತ್ರಿ, ಎಂಬವರನ್ನು ವಾದದಲ್ಲಿ ಜಯಿಸಿದರು. ಮಧುರೆಗೆ ಹೋದಾಗ ಅಲ್ಲಿಯ ನಾಯಕನು ಶ್ರೀಮಠಕ್ಕೆ ಕಲ್ಮಠಗೊಂಡ ಎಂಬ ಗ್ರಾಮವನ್ನು ಉಂಬಳಿಯಾಗಿ ಕೊಟ್ಟನು. ಇತ್ತ ಮಂತ್ರಾಲಯದಲ್ಲಿ ಪ್ರಾಣದೇವರ ಪ್ರತಿಷ್ಠಾಪನೆ ಮಾಡಿದರು. ಆಮೇಲೆ ಮತ್ತೊಮ್ಮೆ ದಕ್ಷಿಣಯಾತ್ರೆಯನ್ನು ಕೈಗೊಂಡಿದ್ದಾಗ ಶ್ರೀರಂಗಪಟ್ಟಣದಲ್ಲಿ ದೇಹಾಸಲ್ಯವುಂಟಾಯಿತು. ಅಲ್ಲಿಯೇ ವೃಂದಾವನಸ್ಥರಾದರು. (ಮಾಘ ಶುದ್ಧ ನವಮಿ)

■ ■ ■

## ೯. ಶ್ರೀ ಸೂರೀಂದ್ರತೀರ್ಥರು

(೧೬೮೮ - ೧೬೯೨)

ಶ್ರೀ ಯೋಗೀಂದ್ರರು ತಮ್ಮ ಅಣ್ಣನಿಗೆ ಯತ್ಯಾಶ್ರಮವನ್ನಿತ್ತು ಪೀಠಸ್ಥರನ್ನಾಗಿ ಮಾಡಿದ್ದೊಂದು ವಿಶೇಷದ ಸಂಗತಿ. ಶ್ರೀ ಸೂರೀಂದ್ರರು ೪-೫ ವರ್ಷ ಮಾತ್ರ ಸಂಸ್ಥಾನವನ್ನು ಆಳಿದರು. ಈ ಅಲ್ಪಾವಧಿಯಲ್ಲಿ ವಿಶೇಷ ಘಟನೆ ಜರುಗಿದಂತಿಲ್ಲ. ಮಧುರೆಯಲ್ಲಿ ಜ್ಯೇಷ್ಠ ಶುದ್ಧ ದ್ವಿತೀಯೆಯಂದು ವೃಂದಾವನಸ್ಥರಾದರು.

ಇವರೀರ್ವರನ್ನು ಕುರಿತ ಎರಡು ಹಾಡುಗಳನ್ನು ಇಲ್ಲಿ ಕೊಟ್ಟಿದೆ.

■ ■ ■

## ೧೯

[ರಾಗ: ........]

**ಶ್ರೀ ಗುರು ಯೋಗೀಂದ್ರತೀರ್ಥಾರ್ಯಾ**
ಬಾಗಿ ನಮಿಸುವೆ ಬಿಡೆ ನಿನ್ನ ಅಡಿಯಾ ಪ.

ಭಾಗವತರ ಪ್ರಿಯ ಕೇಳದೆ ಮೊರೆ ಜೀಯ
ವೇಗದಿ ಹೃದಯದಿ ತೋರಿಸೊ ಹರಿಯಾ ಅ.ಪ.

ಪೂರ್ವದಿ ವೆಂಕಣ್ಣ ಆರ್ಯನೆಂದೆನಿಸಿದೆ
ಶ್ರೀ ರಾಘವೇಂದ್ರರಿಂದಾಶ್ರಮ ಪೊಂದಿದೆ
ವಾರಿಜಾಸನ ಪಿತ ರಾಮನರ್ಚಿಸಿದೆ
ಧಾರುಣಿಯೊಳು ಸತತ ಧ್ಯಾನಿಸಿ, ಮೆರೆದೆ ೧

ಕಾಕಾಶಾಸ್ತ್ರಿ ಅಂದು ಭಾಗ್ಯ ನಗರದಿ ಬಂದು
ವಾಕ್ಯಾರ್ಥದಲಿ ಸೋಲೆ ಮಿಕ್ಕಾದ ವಾದಿಗಳೋಡಿಸುತಾ
ಬೇಕಾದ ಮಧುರೆಯ ಮುದ್ಗಲಗಾದ್ರಿ ನಾಯಕ
ತಾ ಕೊಡೆ ಗ್ರಾಮ ಶ್ರೀ ಕಲ್ಮಠಗೊಂಡ ಶ್ರೀರಂಗದಿ ೨

ಮಂತ್ರಾಲಯದಲ್ಲಿ ಗುರು ಸಮ್ಮುಖದಲ್ಲಿ
ಮಂತ್ರಪ್ರತಿಪಾದ್ಯ ಮಾರುತಿಯ ಸ್ಥಾಪಿಸಿ
ಅಂತರಂಗದಿ ಶ್ರೀ ಲಕುಮೀಶ ರಂಗನ್ನ
ಸಂತತ ಧ್ಯಾನದಿ ನಿಂತೇ ಶ್ರೀರಂಗದೀ ೩

▪ ▪ ▪

## ೨೦

[ಧಾಟಿ: ವಿಠಲಯ್ಯ ವಿಠಲಯ್ಯ ಎಂಬಂತೆ]

**ಸೂರೀಂದ್ರ ಸೂರೀಂದ್ರ ಸೂರಜನರಿಂದಾರಾಧಿತಶ್ರೀ**
ಯೋಗೀಂದ್ರರಿಗೆ ಪೂರ್ವಾಶ್ರಮದಣ್ಣ
ಯೋಗೀಂದ್ರರಿಂದಲಿ ಯೋಗೀಂದ್ರ ನೀನಾದಂಥ ೧

ಖೂಳ ದುರ್ಮತ ಎದೆ ಶೂಲ ನೀನೆಸುತ
ಮೂಲ ರಾಮನ ಪೂಜೆ ಕಾಲಕಾಲದಿ ಗೈದ ೩

ಸುಖಮುನಿ ಶಾಸ್ತ್ರವು ಸ್ಥಿರಸುಖಕೆ ಪಥ್ಯವೆಂದು
ಲಕುಮೀಶನ ಧ್ಯಾನದಿ ಮಧುರೆಲಿ ನಿಂತ ಗುರು ೪



# ೧೦. ಶ್ರೀ ಸುಮತೀಂದ್ರತೀರ್ಥರು

(೧೬೯೨ - ೧೭೨೫)

ಶ್ರೀ ಸುಮತೀಂದ್ರರಿಗೆ ಆಶ್ರಮ ಪಟ್ಟವಾಗಬೇಕೆಂದು ಶ್ರೀ ರಾಘವೇಂದ್ರ ಯತಿಗಳೇ ಸೂಚಿಸಿದ್ದರು. ಮುದ್ದು ವೆಂಕಟಕೃಷ್ಣ ಎಂಬ ಪೂರ್ವಾಶ್ರಮದ ಹೆಸರಿನ ಆ ವಟು ಗುರುರಾಜರಿಗೆ ಬಹಳ ಮೆಚ್ಚಿನವನಾಗಿದ್ದ - ಆತ ಮೇಧಾವಿ ಹಾಗೂ ಶೀಘ್ರಗ್ರಾಹಿ ಎಂಬ ಕಾರಣದಿಂದ:

ಶ್ರೀ ಸುಮತೀಂದ್ರರು ಆಶ್ರಮ ಸ್ವೀಕಾರವಾದೊಡನೆ ಸಂಚಾರತ್ವೇನ ಅರಣಿಗೆ ಬಂದರು. ಅಲ್ಲಿಯ ಸುಭಾನುರಾಯನೆಂಬ ಜಹಗೀರುದಾರನು ಮಾಧ್ವನೇ ಇದ್ದ. ಆಯುರ್ವೇದದ ಜ್ಯೋತಿಷ್ಮತೀ ಎಂಬ ತೈಲವನ್ನು ಪಾನ ಮಾಡಿ ತಾನೊಬ್ಬ ಮಹಾಪಂಡಿತ ಎಂದು ಹೇಳಿಕೊಳ್ಳುತ್ತಿದ್ದ. "ಇವರು ಹೇಗೂ ತರುಣರು. ವಾದದಲ್ಲಿ ಸೋಲಿಸಿ ತನ್ನ ಪಾಂಡಿತ್ಯವನ್ನು ಮೆರೆಸಬೇಕು" ಎಂದು ಯೋಚಿಸಿದನು. ಅರಮನೆಗೆ ಕರೆಯಿಸಿ, ಸತ್ಕಾರ ಮಾಡಿಯಾದ ಮೇಲೆ ಶ್ರೀಗಳನ್ನು ವಾದಕ್ಕೆ ಕರೆದ. ವ್ಯಾಕರಣದ ಒಂದು ಕ್ಲಿಷ್ಟ ಭಾಗದಿಂದ ವಾಕ್ಯಾರ್ಥಕ್ಕೆ ಮೊದಲಾಯಿತು. ಅವನು ನಿಜಕ್ಕೂ ಷಟ್‌ಶಾಸ್ತ್ರಗಳನ್ನು ಅರಗಿಸಿಕೊಂಡವ. ಹಾಗಾಗಿ ಆ ವಾಕ್ಯಾರ್ಥ ಎಂಟು ದಿನಗಳ ವರೆಗೆ ನಡೆಯಿತು.

ತನ್ನ ವಾದ ದುರ್ಬಲವಾದದ್ದನ್ನು ಕಂಡು ಸುಭಾನುರಾಯನು "ಕವಿತಾರಚನೆಯಲ್ಲಿ ಸ್ಪರ್ಧಿಸುವಿರಾ?" ಎಂದು ಕೇಳಿದ. ನಗುನಗುತ್ತ ಶ್ರೀಗಳು ಹೇಳಿದರು : "ನಾವೇನೂ (ಕಾಳಿದಾಸನಂತೆ) ಕಾಳಿಯನ್ನು ಆರಾಧಿಸಲಿಲ್ಲ. (ನಿಮ್ಮ ಹಾಗೆ) ಜ್ಯೋತಿಷ್ಮತಿ ಪಾನಮಾಡಿಲ್ಲ. ಇನ್ನೊಬ್ಬರಿಂದ ಶಬ್ದಚೌರ್ಯ ಮಾಡಿಲ್ಲ. ಹಾಗಿದ್ದರೂ ಕಾವ್ಯ ರಚಿಸಬಲ್ಲೆವು."

ಆದರೆ ಇಲ್ಲಿಯೂ ಅವನಿಗೆ ಅಪಜಯವಾಯಿತು. ಶ್ರೀಗಳವರ ಬಹುಮುಖ ಪ್ರತಿಭೆ, ವರ್ಚಸ್ವೀ ವ್ಯಕ್ತಿತ್ವಕ್ಕೆ ಶರಣಾಗಿ ಹೇಳಿದ : "ಎಲ್ಲ ಮಠಗಳಲ್ಲೂ ಯತಿಗಳಿದ್ದಾರೆ. ಆದರೆ ನಿಮ್ಮನ್ನು ಸರಿಗಟ್ಟುವವರನ್ನು ನಾನು ಕಾಣೆ" ಎನ್ನುತ್ತ ತನ್ನ ಭಕ್ತಿ ದ್ಯೋತಕವಾಗಿ ರಾಹುಕೇತು - ಎಂಬ ವಿಶಿಷ್ಟ ವಾದ್ಯವನ್ನೂ 'ಚಿತ್ರಾಸನದ್ವಯ'ವನ್ನೂ ಅರ್ಪಿಸಿದ.

ಆ ಕಾಲಕ್ಕೆ ಮಧುರೆಯ ಸಂಸ್ಥಾನದಲ್ಲಿ ಮಂಗಮ್ಮ ಎಂಬ ರಾಣಿಯು ಆಳುತ್ತಿದ್ದಳು. ವಿದ್ಯಾ ಪಕ್ಷಪಾತಿಯಾದ ಆಕೆಯು ಆ ರಾಜ್ಯಕ್ಕೆ ಸೇರಿದ ಶ್ರೀರಂಗಮ್‌ದಲ್ಲಿ ಮತತ್ರಯರ ವಾಕ್ಯಾರ್ಥವಾಗಬೇಕೆಂದು ಆಶಿಸಿ ಅದರ ವ್ಯವಸ್ಥೆ ಮಾಡಿದಳು. ಅದಕ್ಕಾಗಿ ಮಾಧ್ವರ ಪರವಾಗಿ ಉತ್ತರಾದಿಮಠ, ವ್ಯಾಸರಾಯ ಮಠದ ಯತಿಗಳೂ ಶ್ರೀ ಸುಮತೀಂದ್ರರೂ ಆಗಮಿಸಿದರು. ಈ ರೀತಿಯಾಗಿ ಮೂವರು ಮಠಾಧೀಶರು ಜೊತೆಯಾಗಿ ಸೇರಿದ್ದರ ದೃಶ್ಯ ಅಪೂರ್ವವಾಗಿದ್ದಿತು. ಆ ದಿನ ಅದ್ವೈತದ ಪಂಡಿತರೊಬ್ಬರಿಂದ ಪೂರ್ವಪಕ್ಷದ ಆರಂಭವಾಯಿತು. ಅದಕ್ಕೆ ಹೆಚ್ಚಾಗಿ

ಸ್ಪಂದಿಸಿದವರು ಶ್ರೀ ಸುಮತೀಂದ್ರರು. ಅದರಿಂದ ಪ್ರೀತರಾದ ಉತ್ತರಾದಿಮಠದ ಸ್ವಾಮಿಗಳು ಅವರನ್ನು ಹೊಗಳುತ್ತ ತಮ್ಮ ಗದ್ದುಗೆಯನ್ನೇ ಬಿಟ್ಟುಕೊಟ್ಟರಂತೆ. ರಾಣಿ ಮಂಗಮ್ಮನಿಗೂ ಶ್ರೀಗಳವರ ಬಗ್ಗೆ ಅಪಾರ ಭಕ್ತಿ ಭಾವ ಉಕ್ಕಿಬಂತು. ಅರಮನೆಯ ಭಂಡಾರದಲ್ಲಿದ್ದ 'ವೈಕುಂಠ ವಾಸುದೇವ' ಎಂಬ ನವರತ್ನಖಚಿತವಾದ ಪ್ರತಿಮೆಯನ್ನು ಅರ್ಪಿಸಿದಳು.

ಶ್ರೀಗಳವರು ಅಲ್ಲಿಂದ ಕುಂಭಕೋಣ, ಗಂಜಿ, ಮೈಸೂರುಗಳಿಗೆ ಆಗಮಿಸಿ ಹೋದೆಡೆಯಲ್ಲೆಲ್ಲ ವರ್ಚಸ್ಸನ್ನು ಬೀರಿದರು. ಶಿವಮೊಗ್ಗೆಯಲ್ಲಿ ತುಂಗಾಸ್ನಾನ ಮಾಡಿಕೊಂಡು ಹೆಳವನಕಟ್ಟೆ ಗ್ರಾಮಕ್ಕೆ ಆಗಮಿಸಿದರು. ಇಲ್ಲಿಯೇ ಸುಪ್ರಸಿದ್ಧ ದಾಸ ಮಹಿಳೆ ಗಿರಿಯಮ್ಮ ಇದ್ದುದು. ಭಗವಂತನನ್ನು ಕೂಸನ್ನಾಗಿ ಎತ್ತಿ ಆಡಿಸಿದವಳೆಂಬ ಐತಿಹ್ಯ ಶ್ರೀಗಳವರಿಗೆ ತಿಳಿದಿತ್ತು. ಅಂದು ಶ್ಯಾನುಭೋಗರ ಮನೆಯ ಭಿಕ್ಷೆಯಲ್ಲಿ ಮೂಲರಾಮನಿಗೆ ವಿಶೇಷ ಪೂಜೆ ನಡೆಯಿತು. ಆ ಮನೆಯ ಸೊಸೆಯಾದ ಗಿರಿಯಮ್ಮ ಭಾವಪರವಶಳಾಗಿ ಹಾಡಿದಳು :

ರಾಮ ರಘುನಂದನ ಕೌಸಲ್ಯಾರಾಮ
ಮದನಕೋಟಿ ಮೋಹನಾಂಗ
ಮಾಧವ ಪುಣ್ಯಚರಿತ ಕರುಣಾಪಾಂಗ
ಕದ್ದನ ವಿಕ್ರಮ ಬಾಹುಧೃತಕೋದಂಡ
ಸದಾನಂದ ಸುಮತೀಂದ್ರ ಹೃದಯಪಂಕಜ ಭೃಂಗ.

ಆ ದಿನ ಅವಳಿಗೇ ಪ್ರಥಮತಃ ತೀರ್ಥ, ಮಂತ್ರಾಕ್ಷತೆ ಕೊಟ್ಟು, ಅನುಗ್ರಹಿಸಿದರು.

ಶ್ರೀ ಸುಮತೀಂದ್ರರು ಅಲ್ಲಿಂದ ಉತ್ತರ ಭಾರತದ ಸಂಚಾರಗೈದು ಮತ್ತೆ ಶ್ರೀರಂಗಕ್ಕೆ ಬಂದರು. ಅಲ್ಲಿಯ ರಂಗನಾಥನ ಮೂರ್ತಿಯ ಕಳೆಯನ್ನು ಓರ್ವ ಮಾಂತ್ರಿಕ ಕಳೆದೊಗೆದಿದ್ದ. ದೇವರ ಮುಖದ ಕಾಂತಿಯೇ ಹೊರಟುಹೋಗಿತ್ತು. ಆಗ ಅರ್ಚಕರ ಪ್ರಾರ್ಥನೆಯ ಮೇರೆಗೆ ಶ್ರೀಗಳವರು ಅದನ್ನು ಸರಿಪಡಿಸಿ, ಇನ್ನು ಮುಂದೆ ಹಾಗಾಗಬಾರದೆಂದು ರಂಗನಾಥನ ಮೂರ್ತಿಯ ಎದುರಿಗೆ ಪ್ರಾಣದೇವರ ಪ್ರತಿಷ್ಠೆ ಮಾಡಿದರು.

ಮರಾಠರ ಶಹಾಜಿ ದಕ್ಷಿಣಭಾಗದಲ್ಲಿ ರಾಜ್ಯವಾಳುತ್ತಿದ್ದ. ಪೂರ್ವಾಶ್ರಮ ಕಾಲದಲ್ಲಿಯೇ ಅವನನ್ನು ಬಲ್ಲವರಾಗಿದ್ದ ಶ್ರೀಗಳು, ಅವನ ಗುಣಗೌರವವನ್ನು ಮೆಚ್ಚಿಕೊಂಡು ಕಾವ್ಯಾದಿ ರಚಿಸಿದ್ದರು. ಶ್ರೀಗಳು ವೇದಾಂತ ಸಾಮ್ರಾಜ್ಯದ ಪೀಠಾಧಿಪರಾದ ಮೇಲೆ ಅವರನ್ನು ಶಹಾಜಿಯು ಬರಮಾಡಿಕೊಂಡು, ಭೂಸ್ವಾಸ್ಥ್ಯಗಳನ್ನು ಕೊಟ್ಟನು.

ಶ್ರೀ ಸುಮತೀಂದ್ರರು ಗ್ರಂಥರಚನೆಯಲ್ಲಿಯೂ ಸಮರ್ಥರಿದ್ದು, ಈ ವಿಷಯದಲ್ಲಿ ವಿಜಯೀಂದ್ರ, ಶ್ರೀ ಸುಧೀಂದ್ರ ಹಾಗೂ ಗುರುರಾಜರ ಜೊತೆಗೆ ಇವರನ್ನೂ ಕಾಣಿಸತಕ್ಕುದು. ವೇದಾಂತ ವಿಚಾರವಾಗಿ ಇರುವ ತತ್ತ್ವಪ್ರಕಾಶಿಕಾ ಮೊದಲಾದ ಪ್ರಾಚೀನ ಗ್ರಂಥಗಳಿಗೆ ವ್ಯಾಖ್ಯಾನ ಬರೆದಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ರಾಮದಂಡಕ, ಯೋಗೀಂದ್ರ ತಾರಾವಲಿ ಮುಂತಾದ ಕೃತಿಗಳನ್ನೂ ಕೆಲವು ಚಾಟು ಪದ್ಯಗಳನ್ನೂ ರಚಿಸಿದ್ದಾರೆ. ಅವರ ವಿಶೇಷ ರಚನೆ - ಶ್ರೀ ಸುಧೀಂದ್ರರ ಕೃತಿಗಳ ಮೇಲಿನ ಟೀಕೆಗಳಲ್ಲಿ ವ್ಯಕ್ತವಾಗಿದೆ. "ಸುಧೀಂದ್ರ ಶ್ರೀಗಳವರ ಗ್ರಂಥಗಳಿಗೆ ವ್ಯಾಖ್ಯಾನ ಮಾಡಬೇಕೆಂದರೆ ನನ್ನ ಹೊರತು ಬೇರಾರೂ ಸಮರ್ಥರಲ್ಲ" ಎಂದು ಹೇಳುವಷ್ಟು ಅವರಲ್ಲಿ ಆತ್ಮವಿಶ್ವಾಸವಿದ್ದಿತು. ಅದರಂತೆ ಗುರುಸಾರ್ವಭೌಮರ ಕೃತಿಗಳಿಗೂ ಅವರು ವ್ಯಾಖ್ಯಾನ ಬರೆದಿದ್ದಾರೆ.

ಮರೆಯದೇ ಉಲ್ಲೇಖಿಸಬೇಕಾದದ್ದು ಅವರ 'ಮಂತ್ರರತ್ನ ಕೋಶ'. ಅದರಲ್ಲಿ ಆಹ್ನೀಕೋಪಯೋಗಿಯಾದ ಮಂತ್ರ, ವಿಧಿ ವಿಧಾನಗಳನ್ನೂ ಕೊಟ್ಟಿದ್ದಾರೆ.

ಶ್ರೀಗಳವರ ವರ್ಚಸ್ಸು ಎಷ್ಟಿತ್ತೆಂದರೆ ತಮಿಳುನಾಡಿನಲ್ಲಿ ಮಂತ್ರಾಲಯ ಮಠಕ್ಕೆ 'ಸುಮತೀಂದ್ರ ಮಠ'ವೆಂದೇ ತಿಳಿಯಲಾಗುತ್ತಿತ್ತು. ಶ್ರೀಗಳವರು ತಮ್ಮ ಕೊನೆಗಾಲವನ್ನು ಶ್ರೀರಂಗಮ್‌ನಲ್ಲಿಯೇ ಕಳೆದು ಅಲ್ಲಿಯೇ ವೃಂದಾವನಸ್ಥರಾದರು. ( ಆಶ್ವಯುಜ ಕೃಷ್ಣ ದ್ವಾದಶೀ ).

■ ■ ■

## ೨೧

**(ಧಾಟಿ : ಈ ಪರಿಯ ಸೊಬಗಾವ)**

**ಶ್ರೀ ಗುರು ಸುಮತೀಂದ್ರ ಯೋಗಿಗಳಿಗಭಿನಮಿಪೆ**
ಭಾಗವತ ಜನ ಸಂಗ ಯೋಗ ಕರುಣಿಸಲೀ ಪ

ಪೋಗಿ ದುರ್ಜನರೊಡನೆ ನೀಗಿ ಸತ್ಕರ್ಮಗಳ
ಭೋಗದಾಶೆಯ ಭವದ ರೋಗವ ಬಿಡಿಸೆಂದು ಅ.ಪ.

ಮಧ್ವರಾಯರ ಪ್ರಿಯ ಶ್ರೀ ರಾಘವೇಂದ್ರರಡಿಯ
ಪದ್ಮಮಧುಕರರಾದ ಮುದ್ದು ವೆಂಕಟಕೃಷ್ಣ
ಇದ್ದು ಇವರಲಿ ಆರ್ಯ ಅಧ್ಯಯನ ಮಾಡುತ್ತ
ಶುದ್ಧ ಪಂಡಿತರೆನಿಸಿ ಮುದ್ದಾಗಿ ಮೆರೆದಂಥ ೧

ಸೂರೀಂದ್ರತೀರ್ಥರು ಮೇರು ಕರುಣವ ಮಾಡಿ
ಏರಿಸೇ ಪಟ್ಟದಲಿ ವೇದಾಂತ ರಾಜ್ಯ
ಭಾರವನು ತಾ ವಹಿಸಿ ಮೂಲರಾಮನ ಪದವ
ಆರಾಧಿಸೀ ಜಗದಿ ರಾರಾಜಿಸೀದಂಥ ೨

ಮಧುರೆ ರಾಣಿ ಅಂದು ಮಂಗಮ್ಮ ಮಠತ್ರಯದ
ಸದಮಲ ಸಮ್ಮೇಳ ವಿಧಿಯಿಂದ ರಚಿಸೇ
ಒದಗೆ ಮಠತ್ರಯ ಮೌನಿಗಳು ಅಧಮ ದುರ್ಮತದವರ
ಚದುರ ವಾಕ್ಯಾರ್ಥದಲಿ ಇವರೇ ಜಯಿಸಿದರಂದು ೩

ಸತ್ಯಪೂರ್ಣರಿವರ ಸತ್ವಪಾಂಡಿತ್ಯಕ್ಕೆ
ನಿತ್ಯ ಆರೋಹಿಸಲು ಚಿತ್ರಾಸನೀಯೇ
ರತ್ನಮಯ ವೈಕುಂಠ ವಾಸುದೇವನ ಮೂರ್ತಿ
ಇತ್ತು ಕಲ್ಪವೃಕ್ಷರಾಣಿ ಮನ್ನಿಸಿದಳು ೪

ಕ್ರೂರ ಮಾಂತ್ರಿಕನೊಬ್ಬ ಶ್ರೀರಂಗನಾಥನ ಕಳೆಯ
ಚೋರತನದಲಿ ಅವನು ಆಕರ್ಷಮಾಡುತಿರೇ
ಸಾರಿ ಅರ್ಚಕರಿದನ ಧೀರರಿವರಿಗೆ ಪೇಳೆ
ಸೂರಿ ಮಂತ್ರವ ಜಪಿಸಿ ಕಿಡಿಗೇಡಿಯೋಡಿಸಿದಾ ೫

ನಿಲಿಸಿ ಮಂಗೇಶನನು ರಂಗನಾಥನ ಮುಂದೆ
ಸಲೆ ಭಾವರತ್ನಕೋಶ ಅಧಿಕರ್ಣ ರತ್ನಮಾಲೆ
ಹಲವಾರು ಗ್ರಂಥಗಳ ವ್ಯಾಖ್ಯಾನ ರಚಿಸುತಲಿ
ಇಳೆಯ ಸಜ್ಜನಕಿತ್ತು ಉಪಕಾರ ಗೈದಂಥ ೬

ಸುಖಮುನಿಯ ಶಾಸ್ತ್ರದ ಸುಖಜ್ಞಾನ ಕರುಣಿಸುತ
ವಿಖನಸಾರ್ಚಿತ ಮೂಲ ಲಕುಮೀಶ ರಂಗನ್ನ
ಸುಖದಿ ನೆನೆದಾಶ್ವೀಜ ವದ್ಯ ದ್ವಾದಶಿಯಂದು
ಸಕಲ ಮಂಗಳ ಕೊಡುತಲಿ ಶ್ರೀರಂಗದಲಿ ಮೆರೆವಾ ೭



## ೧೧. ಶ್ರೀ ಉಪೇಂದ್ರತೀರ್ಥರು

ವಿಜಯೀಂದ್ರತೀರ್ಥರ ಎನ್ನುವವರು ಅನೇಕ ವರ್ಷಗಳಿಂದ ಮಠದಲ್ಲಿ ಶಿಷ್ಯರಿಗೆ ಪಾಠಪ್ರವಚನ ಮಾಡುತ್ತಿದ್ದರು. ಅವರ ಪಾಂಡಿತ್ಯ ಪ್ರೌಢಿಮೆಯನ್ನು ಮನಗಂಡ ಸುಮತೀಂದ್ರರು ಅವರಿಗೆ ಸನ್ಯಾಸಾಶ್ರಮ ಇತ್ತರು.

ಶ್ರೀ ಉಪೇಂದ್ರತೀರ್ಥರು ಕೇವಲ ಮೂರು ವರ್ಷ ಮಾತ್ರವೆ ಪೀಠಸ್ಥರಾಗಿದ್ದರು. ಹೀಗಾಗಿ ಅವರನ್ನು ಕುರಿತು ಹೆಚ್ಚಿನ ವಿವರಗಳು ಲಭ್ಯವಿಲ್ಲ. ಇವರೂ ಶ್ರೀರಂಗಮ್‌ದಲ್ಲಿ ವೃಂದಾವನಸ್ಥರಾದರು. (ಮಾರ್ಗಶಿರ ವದ್ಯ ಅಷ್ಟಮಿ).

■ ■ ■

## ೧೨. ಶ್ರೀ ವಾದೀಂದ್ರತೀರ್ಥರು

(೧೭೨೮ - ೧೭೫೦)

ಈ ಯತಿಗಳು ಶ್ರೀ ರಾಘವೇಂದ್ರಗುರುಗಳ ಪೂರ್ವಾಶ್ರಮದ ಮರಿಮಕ್ಕಳು. ಅವರು ಪಟ್ಟಕ್ಕೆ ಬಂದಾಗ ದಕ್ಷಿಣ ಭಾರತದ ಸ್ಥಿತಿ ಹದಗೆಟ್ಟಿತ್ತು. ರಾಜಕೀಯ ಅಸ್ಥಿರತೆಯಲ್ಲಿ, ಪಾಳೆಯಗಾರರ ಸಂಘರ್ಷದಲ್ಲಿ ಶ್ರೀಮಠದ, ಎಲ್ಲೆಲ್ಲಿಯೋ ಹರಡಿದ ಆಸ್ತಿಗೆ ಸಾಕಷ್ಟು ಧಕ್ಕೆ ತಗುಲಿತು. ಶ್ರೀ ವಾದೀಂದ್ರರು ಅದನ್ನು ಉಳಿಸಿಕೊಳ್ಳಲು ತುಂಬಾ ಪ್ರಯತ್ನಿಸಬೇಕಾಯಿತು. ಸ್ವತಹ ಮಂತ್ರಾಲಯದ್ದೇ ಅತಂತ್ರ ಸ್ಥಿತಿಯಲ್ಲಿದ್ದಾಗ ಶ್ರೀ ವಾದೀಂದ್ರರು ಆದವಾನಿಯ ಅಧಿಕಾರಿ ಮುಜಫರ್ ಜಂಗನೊಡನೆ ಮಾತನಾಡಿ ಆ ಸ್ಥಳದ ಹೊಸ ಸನ್ನದನ್ನು ಮಾಡಿಸಿಕೊಂಡರು.

ಈ ಆಡಳಿತಾತ್ಮಕ ವಿಪತ್ತುಗಳು ಸಾಲದೆನ್ನುವಂತೆ ಶ್ರೀಮಠದಲ್ಲಿದ್ದ ರತ್ನಖಚಿತವಾದ ಪ್ರತಿಮೆ ಮುಂತಾದವು ಕಳವಾದುವು. ಕಳ್ಳರು ಸಿಕ್ಕಿಬಿದ್ದರಾದರೂ, 'ಕಲ್ಪವೃಕ್ಷ' ಎನ್ನುವ ವಸ್ತು ಮಾತ್ರ ಮರಳಿ ಸಿಗಲಿಲ್ಲ. ಈ ರೀತಿಯ ಕಳ್ಳಕಾಕರ ಉಪದ್ರವ ಮೇಲಿಂದ ಮೇಲೆ ಆಗುತ್ತಿತ್ತು.

ಶ್ರೀಗಳು ಪುನಹ ಸಂಚಾರಕ್ಕೆ ಹೊರಟು ಧಾರವಾಡ ಪ್ರದೇಶಕ್ಕೆ ಆಗಮಿಸಿದರು. ಸವಣೂರು, ರಾಣೆಬೆನ್ನೂರ, ಹಾವನೂರ ಮುಂತಾದ ಕಡೆಗಳಲ್ಲಿಯ ಸಂಸ್ಥಾನಿಕರು ಹಲವು ಜಹಗೀರುಗಳನ್ನು ಕೊಟ್ಟು ಸನ್ಮಾನ ಮಾಡಿದರು.

ಶ್ರೀಗಳವರು ಗ್ರಂಥಕರ್ತರೂ ಆಗಿದ್ದರು. ತತ್ತ್ವ ಪ್ರಕಾಶಿಕಾ ಮತ್ತು ತತ್ತ್ವೋದ್ಯೋತ - ಇವುಗಳಿಗೆ ಟಿಪ್ಪಣಿ ರಚಿಸಿದ್ದಾರೆ. 'ಭೂಗೋಳ ಖಗೋಳ ವಿಚಾರ' ಎಂಬುದು ವಿಶಿಷ್ಟ ಗ್ರಂಥ. ತಮ್ಮ 'ಗುರುಗುಣಸ್ತವನ' ಕೃತಿಯಲ್ಲಿ ಶ್ರೀ ಹರಿಯಿಂದ ಆರಂಭಿಸಿ, ಶ್ರೀ ಮಧ್ವಾಚಾರ್ಯರು ಅನಂತರ ರಾಘವೇಂದ್ರ ಗುರುಗಳ ಪರ್ಯಂತ ಮಠದ ಪರಂಪರೆಯನ್ನು ಕೊಡಮಾಡಿದ್ದಾರೆ. ಅದೊಂದು ಮನನೀಯವಾದ ದಾಖಲೆಯೂ ಹೌದು. ಕಾವ್ಯರಚನೆಯಲ್ಲಿಯೂ ಶ್ರೀಗಳು ಸಿದ್ಧಹಸ್ತರಾಗಿದ್ದರು. ಅವರದು ಸರಸ ಪ್ರೌಢಿಮೆಯ ರಚನೆ. ಅವರು ತಮ್ಮೊಂದು ನಾಂದಿಪದ್ಯದಲ್ಲಿ ಶ್ರೀಹರಿಯ ಕಟಾಕ್ಷವನ್ನು ಆಹ್ವಾನಿಸಿದ್ದು, ಪದಲಾಲಿತ್ಯದ ದೃಷ್ಟಿಯಿಂದ ಅದರ ಪದ್ಯಾರ್ಧವನ್ನು ಇಲ್ಲಿ ಕೊಡಬಯಸಿದೆ :

ಉನ್ಮೀಲನ್ನೀಲ ನೀರೇರುಹ ನಿವಹ - ಮಹಃ - ಪುಷ್ಟಿ - ಮುಷ್ಟಿಂಧಯ ಶ್ರೀಃ
ಶ್ರೀ - ಭೂ - ದುರ್ಗಾ - ದೃಗಂತ - ಪ್ರಚಯ - ಪರಿಚಯೋದಾರ - ಕಿರ್ಮೀಶ - ಭಾವಃ
ಸ್ವೈರ - ಕ್ಷೀರೋ - ನಿರ್ಯಚ್ಛ್ರತಿ - ರುಚಿ - ನಿಚಯಾ ಖರ್ವ - ಗರ್ವಾಪನೋದೀ
ಪಾತುಶ್ರೀ ನೇತುರಸ್ಮಾನ್ ಸಪದಿ ಬುಧಜನ ತ್ರಾಣ ದಕ್ಷಃ ಕಟಾಕ್ಷಃ

ಶ್ರೀಗಳವರು ಕನ್ನಡದಲ್ಲಿ ಕೆಲವು ಕೀರ್ತನೆಗಳನ್ನು ರಚಿಸಿದ್ದುದನ್ನು ಅವಶ್ಯವಾಗಿ ಕಾಣಿಸತಕ್ಕುದು. ಮಂತ್ರಾಲಯ ಮಠದ ಪರಂಪರೆಯಲ್ಲಿ ಅವರು ಮೂರನೆಯ ಕೀರ್ತನ ರಚಯಿತರು. (ದುರ್ದೈವಕ್ಕೆ ಒಂದೆರಡನ್ನು ಬಿಟ್ಟರೆ ಅವರ ಎಲ್ಲ ಕೀರ್ತನೆಗಳು ದೊರೆಯುತ್ತಿಲ್ಲ) ದೊರೆತವುಗಳನ್ನು ಅನುಬಂಧ ೧ರಲ್ಲಿ ಕೊಟ್ಟಿದೆ.

ಶ್ರೀ ವಾದೀಂದ್ರರು ಕ್ರಿ.ಶ. ೧೭೫೦ರ ಜ್ಯೇಷ್ಠ ಶುದ್ಧ ನವಮಿಯಂದು ಮಂತ್ರಾಲಯದಲ್ಲಿಯೇ ಅಸು ನೀಗಿದರು. ಆದರೆ ಅವರಿಗೆ ಲಭ್ಯವಾದ ವೃಂದಾವನ ಸ್ಥಳವು ಗುರುಸಾರ್ವಭೌಮರ ಮೂಲ ವೃಂದಾವನದ ಬದಿಯಲ್ಲಿದ್ದುದೇ. ಅಷ್ಟು ಮಾತ್ರವಲ್ಲ, ಆ ಸ್ಥಳವು ಮೊದಲು ಶ್ರೀ ಗುರುಗಳ ವೃಂದಾವನಕ್ಕೆಂದು ನಿಯೋಜಿತವಾಗಿತ್ತು. ಈ ದೃಷ್ಟಿಯಿಂದಲೂ ಶ್ರೀ ವಾದೀಂದ್ರರನ್ನು ಮಹಿಮಾತಿಶಯರೆಂದು ಬಗೆಯತಕ್ಕುದು.



## ೨೨

[ಧಾಟಿ: ಬಾರೋ ಮನೆಗೆ ಗೋವಿಂದಾ. ಎಂಬಂತೆ]

ಹಿಂಗದೆ ನೀ ಭಜಿಸೋ ಈ ಮೌನಿ ಪದಗಳ
ಹಿಂಗದೆ ನೀ ಭಜಿಸೊ ಪ

ಮಂಗಳವೀವ ಶ್ರೀರಂಗ ಸುಕ್ಷೇತ್ರದಿ
ಕಂಗೊಳಿಸುವ ಮುನಿಪುಂಗವ ಉಪೇಂದ್ರಾ ಅ.ಪ.

ಅಜಭಾವಿಶಾಸ್ತ್ರದಿ ನಿಜಪಂಡಿತರಾದ
ವಿಜಯೀಂದ್ರಾಚಾರ್ಯರ ಕರೆದಾಶ್ರಮವಿತ್ತೂ
ವಿಜಯಿ ಶ್ರೀ ಸುಮತೀಂದ್ರ ಯತಿಗಳು
ಅಜಕರಾರ್ಚಿತ ಮೂಲರಾಮನ ೧

ಸದಮಲ ಸನ್ಯಾಸ ವಿಧಿಯಲ್ಲಿ ಬಾಳುತ
ಸದ್ಭಾಷ್ಯ ವಿಧಿಸೂತ್ರ ಸುಧಾದಿಗಳ ಪೇಳುತ್ತ
ಅಧಮ ದುರ್ವಾದಿಗಳ ಓಡಿಸಿ।
ಮುದದಿ ರಾಮನ ಪಾದವ ಪೂಜಿಸಿ
ಹೃದಯದಲ್ಲಿ ಹರಿಯ ಧ್ಯಾನಿಸಿ । ಒದಗಿ ಸುಜನರ ಬಿಡದೆ ಪೊರೆವ ೨

ಆನಂದಶಾಸ್ತ್ರಾಬ್ಧಿ ಮೀನ ಶ್ರೇಷ್ಠರಾದ
ಶ್ರೀನಿವಾಸಾಚಾರ್ಯರ ಕರೆಯುತಲೀ
ಜಾನಕೀಶ ಲಕುಮೀಶನಾಜ್ಞೆಯಲಿ । ಸಾನುಮತದಿ ಸನ್ಯಾಸವೀಯುತ
ಜ್ಞಾನಿ ಅಷ್ಟಮಿ ಮಾರ್ಗಶಿರ ವದ್ಯ । ತಾಣ ವೃಂದಾವನವ ಸೇರ್ದರ್ ೩

■ ■ ■

## ೨೩

[ರಾಗ : ಭೈರವಿ, ಆದಿತಾಳ]

**ಕಂಡೆ ಕಂಡೆನೊ ಕಂಗಳಲಿ ಭೂ –**
ಮಂಡಲದೊಳು ಮೆರೆವ ಯತಿಗಳ
ಮಂಡಲಾಬ್ಧಿಗೆ ಸೋಮನೆನಿಪ ಅ –
ಖಂಡ ಮಹಿಮ ವಾದೀಂದ್ರ ಗುರುಗಳ ಪ

ನಸುನಗೆಯ ಮೊಗ ಪಸರಿಸಿದ ದ್ವಾ-
ದಶನಾಮಗಳು ಶ್ರೀಮುದ್ರೆ ಮುದದಿಂದ
ನೊಸಲಿಗೊಪ್ಪುವ ಗಂಧ ಅಕ್ಷತೆ
ಎಸೆವ ಸಣ್ಣಂಗಾರ ಕಿವಿಯಲಿ
ಹಸನಾದ ಎಳೆ ತುಳಸಿ ಶೋಭಿಸೆ
ಬೆಸೆಸುವ ಒಂದೊಂದು ಮಾತಾ-
ಲಿಸಿದರದು ವೇದಾರ್ಥ ತುಲ್ಯಾ -
ಲಸವಗೈಯಿಸದೆ ಬರುವ ಗುರುಗಳ ೧

ಮೊಸಳಿವಾಯ ಪಲ್ಲಕ್ಕಿ ಸುತ್ತು ಬಾ -
ರಿಸುವ ನಾನಾ ವಾದ್ಯದಾ ಘೋಷ
ಪುಸಿಕರೆದೆದಲ್ಲಣರು ಎಂಬಾ
ದಶದಿಕ್ಕಿನೊಳು ಕೀರ್ತಿ ತುಂಬಿರೆ
ಶಿಶುವ ಮೊದಲಾದವರು ತಮತಮ
ಬೆಸನ ಪೇಳಲು ಕೇಳಿ ಅವರ -
ಬ್ಬಸವ ಕಳೆದಿಷ್ಟಾರ್ಥ ತೋರುವ
ಋಷಿಕುಲೋತ್ತಮರಾದ ಗುರುಗಳ
ಶ್ವಸನಮತ ವಾರಿಧಿಗೆ ಪೂರ್ಣ
ಶಶಿ ಎಂದೆನಿಸಿಕೊಂಬ ಧೀರುದಾರರ ೨

ಅಸಮ ತತ್ವಪ್ರಮೇಯದಲಿ ನಿರ್ಮಿಸಿದನೆ ಲೋ -
ಕೇಶ ಇವರನ್ನ ವಸುಧಿ ಅಮರರು
ಪ್ರಸರ ಎಡಬಲ ಎಸೆದು ತು-
ತಿಸಲು ಹಿಗ್ಗಿ ಕರುಣಾ -
ರಸಭರಿತರಾಗಿ ನೋಡುತ್ತ ಮಾ -
ನಸದಿ ಹರಿಪದ ಭಜಿಪ ಗುರುಗಳ || ೩

ಕುಸುಮಶರನ ಬಾಣವನು ಖಂಡ್ರಿಸಿ
ಬಿಸುಟ ಸಂಪನ್ನ ವಿದ್ಯಾ

ವಸುವಿನಲಿ ಆವಾಗ ತಲೆ ತೂ-
ಗಿಸುವರು ಪಂಡಿತರ ಮೆಚ್ಚಿಸಿ
ವಶವೆ ಪೊಗಳಲು ಎನಗೆ ಇವರ ದ-
ರುಶನದಿಂದಲಿ ಗತಿಗೆ ಪಥ ನಿ -
ಮಿಷದೊಳಗೆ ಇದು ಸಿದ್ಧವೆಂದು ವಂ-
ದಿಸಿರೊ ಮರೆಯದೆ ಈ ಗುರುಗಳಾ ॥ ೨

ಮಿಸುಣಿಪ ಮಂಟಪದೊಳಗೆ ರಂ-
ಜಿಸುವ ರಾಮನ ಕುಳ್ಳಿರಿಸಿ ಅ -

ರ್ಚಿಸುವ ಚಿತ್ತೇಕತಾಗ್ರದಲಿ ವೊ-
ಲಿಸುವ ತಂತ್ರಸಾರೋಕ್ತ ಬಗೆಯನು
ಕುಶಲರಾದ ಉಪೇಂದ್ರ ಮುನಿಕರ
ಬಿಸಜದಿಂದಲಿ ಜನಿಸಿ ಭಕುತಿಲಿ
ಅಸುರರಿಪು ನೆರಿ ವಿಜಯವಿಠಲನ
ಹೆಸರುಗಳ ಎಣಿಸುವ ಗುರುಗಳ

■ ■ ■

## ೨೪

[ರಾಗ: ........]

**ಎಣೆಯಾರೊ ನಿಮಗೆ ಕುಂಭಿಣಿಯ ಮಧ್ಯದ -**
ಲಿನ್ನು ಮನಸಿಜ ಆರಂಭಿಸಿ ಮನು, ಮುನಿಕುಲ
ಚಿಂತಾಮಣಿಯೆ, ವಾದೀಂದ್ರ ಮರುತಮತ
ವನಧಿ ಚಂದ್ರ ಕುಮತಗಜಗಣಕೆ, ಮೃಗೇಂದ್ರ
ಸ್ನಾನಾನುಷ್ಠಾನ ಕಾಲದಲ್ಲಿ, ಶ್ರೀರಂಗ
ಪಾಣಿಯ ನ್ಯಾಸ, ಧ್ಯಾನ ಮಾಡುವ, ಧೀರ

ದಾನಾದಿ, ಕರ್ಮ, ಶಮೆ, ದಮೆ, ನಾನಾ
ಗುಣಾರ್ಣ, ಭಜಿಸುವಂಥ ಧೀರ ಪ್ರಸನ್ನ ೧

ಹರಿಯೆ ಸರ್ವೋತ್ತಮ, ಮರುತ ದೇವನೆ
ಗುರು, ಎರಡು, ಮೂರು ಭೇದ ಸ್ಥಿರವೆಂದು, ಸ್ಥಾಪಿಸಿ
ಧರೆಯೊಳು, ಮೆರೆದೆ, ವಾದಿಗಳುಕ್ತಿ ಧುರದಿಂದ
ತರಿದೆ, ನಂಬಿದವರ ಕರುಣದಿ ಪೊರೆದೆ ೨

ವೇದಾರ್ಥಗಳನೆಲ್ಲ ವ್ಯಾಖ್ಯಾನ ಮುಖದಿಂದ
ಸಾಧಿಸಿ, ಧರೆಗೆಲ್ಲ ಬೋಧಿಸಿ ಅವರಘ
ಭೇದವ ತರಿದೆ ಮನೋಭೀಷ್ಟ ಮೋ-
ದದಿ ಗರೆದೆ, ರಾಮನಾಮ ಸ್ವಾದ ಸವಿದೆ ೩

ದರಹಾಸ ಸರಿತತೀರ ಮಂತ್ರಾಲಯದಲ್ಲಿ
ಗುರುರಾಯ ಆಜ್ಞೆಯಿಂದವರ ಸನ್ನಿಧಿಯಲ್ಲಿ
ಸ್ಥಿರವಾಗಿ ನಿಂದೆ ಸುಮಹಿಮೆಯಲಿ
ಮೆರೆವೆ, ನೀ ಮುಂದೆ ದಯದಲೆನ್ನ ಪೊರೆಯಯ್ಯ ತಂದೆ ೪

ಮರುತಾಂತರ್ಗತ ಗೋಪಾಲ ವಿಠಲನ್ನ
ಹರುಷದಿ। ಪೂಜಿಪ ಗುರು ಉಪೇಂದ್ರ -
ತೀರ್ಥರ, ಕರಕಂಜಜಾತ, ಭಕ್ತರ ಕಾಮ, ವರ
ಪಾರಿಜಾತ ಕಾಮಧೇನು ಕರುಣಿಸೋ ದಾತ ೫

■ ■ ■

## ೨೫

[ರಾಗ: ........]

**ವಾದೀಂದ್ರ ಗುರುರಾಜಾ । ನಿನ್ನ**
ಪಾದವ ತೋರಿಸಯ್ಯಾ
ವಾದೀಂದ್ರ ಗುರು ನಿನ್ನ
ಪಾದವ ನಂಬಿದೇ

ಮೋದವ ಕೊಡುವುದು ಮದಗಳೋಡಿಸಿ ಪ

ಉಪೇಂದ್ರ ಕರಕಮಲ ಜಾತ
ಪಾಪಗಳೋಡಿಸಯ್ಯಾ
ಪಾಪರಾಶಿಯ ಸುಟ್ಟು
ದ್ರೌಪದೀವರದನ
ಕೃಪೆಯಾಗುವಂತೆ ಮಾಡೋ
ಶ್ರೀಪತಿಪ್ರಿಯನೇ ೧

ಮೂಲರಾಮರ ಪಾದಪದುಮದಿ
ಅಳಿಯಂತಿಪ್ಪ ಧೀರ
ಶೀಲಾದಿ ಗುಣವಿತ್ತು
ಶ್ರೀಲೋಲನಂಘ್ರಿಯ
ಮಲಿನ ಮನವ ಕಳೆದು
ಪೊಳೆಯುವಂತೆ ಮಾಡೋ ೨

ತುಂಗಾತೀರದೊಳಿದ್ದು ನಿತ್ಯ
ಭಂಗಗಳೋಡಿಸುವಿ
ಶೃಂಗಾರ ತುಳಸೀಯ
ಮಂಗಳ್ಹಾರವ ಧರಿಸಿ
ತುಂಗಮಹಿಮ ನರ -
ಸಿಂಗಮೂರುತಿ - ತೋರೋ ೩

■ ■ ■

## ೧೩. ಶ್ರೀ ವಸುಧೇಂದ್ರತೀರ್ಥರು

(೧೭೫೦ - ೧೭೬೧)

ಪೂರ್ವಾಶ್ರಮದಲ್ಲಿ ಪುರುಷೋತ್ತಮಾಚಾರ್ಯರೆಂದು ಪರಿಚಿತರಾಗಿದ್ದ ಶ್ರೀ ವಸುಧೇಂದ್ರರಿಗೆ ಹೊರಗಿನ ಲೌಕಿಕ ವಿಷಯಗಳಲ್ಲಿ ಆಸಕ್ತಿ ಕಡಿಮೆ ಇದ್ದಿತು. ತಾವಾಯಿತು, ತಮ್ಮ ಧ್ಯಾನ ಪಾಠಪ್ರವಚನಗಳಾಯಿತು. ಆದಾಗ್ಯೂ ಶ್ರೀ ವಾದೀಂದ್ರರು ಕೈಕೊಂಡ ಮಠದ

ಜಹಗೀರುಗಳನ್ನು ಉಳಿಸಿಕೊಳ್ಳಲು ಇವರೂ ಮುಂದುವರಿಯಬೇಕಾಗಿ ಬಂದಿತು. ಈ ನಿಮಿತ್ತದಿಂದ ಕೆಲವೇ ವರ್ಷಗಳ ಹಿಂದೆ ಕಿರೀಟಗಿರಿ ಗ್ರಾಮವು ತಪ್ಪಿಹೋದದ್ದು ಶ್ರೀಗಳವರ ಪ್ರಯತ್ನದಿಂದಾಗಿ ಮರಳಿ ದೊರಕುವಂತಾಯಿತು. ಕೆಲವು ತಿಂಗಳು ತಮಿಳುನಾಡಿನಲ್ಲಿ ಸಂಚರಿಸಿದಾಗ ಅಲ್ಲಲ್ಲಿ ಶ್ರೀಗಳವರು ಸನ್ಮಾನಿಸಲ್ಪಟ್ಟರು. ಒಟ್ಟಿನಲ್ಲಿ ಅವರು ಮಂತ್ರಾಲಯದಲ್ಲಿಯೇ ಹೆಚ್ಚು ಕಾಲ ದಿನಗಳೆದರು. ತುಂಗಭದ್ರಾತೀರದ ಕೆಂಚನಗುಡ್ಡ ಎಂಬಲ್ಲಿ ವೃಂದಾವನಸ್ಥರಾದರು ( ಅಶ್ವಯುಜ ಕೃಷ್ಣ ಸಪ್ತಮೀ ). ಇಲ್ಲಿ ಬಂದಿರುವ 'ತರಣಿ ಕುಲೋತ್ಪನ್ನ' ಎಂಬ ೨೬ನೆಯ ಕೀರ್ತನೆ ಶ್ರೀ ವಸುಧೇಂದ್ರರು ಪೂಜಿಸಿದ ಮೂಲ ರಾಮದೇವರ ವರ್ಣನೆಯಾಗಿದೆ.

■ ■ ■

## ೨೬

## ಸುಳಾದಿ

### ಧ್ರುವತಾಳ

ತರಣಿ ಕುಲೋತ್ಪನ್ನ ತಪುತಕಾಂಚನವರ್ಣ
ಪರಮ ಮಂಗಳಮೂರ್ತಿ ಪಾವನ್ನ ಸುಕೀರ್ತಿ
ಕ್ಷರ ಅಕ್ಷರರಿಂದ ವಂದಿತ ವ್ಯಾಪುತ
ಶರಣಜನರಪಾಲ ಶತ ಆನಂದಜನಕ
ಪರಿಪೂರ್ಣಗುಣಭರಿತ ವರಜ್ಞಾನ ಪ್ರದಾತ
ಅರಿತು ಫಲವ ತ್ರಿವಿಧರಿಗೆ ಇಪ್ಪುವ ದಾತ
ಧರೆ ಈರೇಳು ರಕ್ಷಕ ಧರ್ಮಪ್ರತಿಪಾಲಕ
ಸರಿಯಿಲ್ಲದ ದೇವ ಸರ್ವೋತ್ತಮ
ದುರುಳಜನಮರ್ದನ ದುಃಖಾದಿಗಳ ದೂರ
ತರುಣಿಯಿಂದ ಬೆರೆದು ವರಗಳನೀವುತ
ನಿರುತದಿ ನಮ್ಮ ವಸುಧೇಂದ್ರ ಮುನಿಯ ಚೆಲ್ವ
ಕರಕಮಲದಲಿ ನಿಂದು ಮೆರೆವ ದಾತ

ಪರಮದಯಾಳು ರಾಮ ಗೋಪಾಲವಿಠಲ ನಿನ್ನ
ದರುಶನವೆ ಇಂದಿನ ದಿನವೆ ಸುದಿನವು

## ಮಠ್ಯತಾಳ

ಆದಿಯಲ್ಲಿ ಆದರದಲ್ಲಿ ನಿನ್ನ ಮೋದದಿ ಅರ್ಚಿಸಿ
ಸಾಧಿಸಿ ಪದವಿಯ ಐದುವ ಧರೆಗೆ
ಸಾಧುಜೀವರ ಪೊರೆಯೆ ಕ್ರೋಧರಹಿತ ನಿನ್ನ
ಮೇದಿನಿಯೊಳಗಿಟ್ಟು ಹಾದಿಯ ತೋರಿದ ಅಜನು ನಿನ್ನ
ಪಾದಸೇವೆಯ ಶೋಧಿಸಿ ಮಾಳ್ಪರಿಗೆ
ಬಾಧೆ ಗೆಲಿಸುವುದು ಜನನ ಮರಣಗಳ
ಪಾದ ಸೋಕಿದ ಶಿಲೆಯ ಪಾವನ್ನ ಮಾಡಿದ
ಶ್ರೀಧರ ರಾಮ ಗೋಪಾಲವಿಠಲ
ವಾದೇಂದ್ರಸುತರಿಗೊಲಿದು ಮೆರೆವ ಪ್ರೀತ ೨

## ರೂಪಕತಾಳ

ಚೆಂದದಿ ಬೊಮ್ಮ ರುದ್ರ ಇಂದ್ರಾದಿಗಳು
ಕುಂದದೆ ಸುರಋಷಿಗಂಧರ್ವಾದಿಗಳು
ಒಂದೊಂದಂಶದಿಂದ ಬಂದು ನಿನ್ನರ್ಚಿಸಿ
ಮಂದ ಬುದ್ಧಿಗಳುಳ್ಳ ಜಗವ ಪಾಲಿಸುವರು
ಮಂದಮತಿಗಳು ಇವರ ಮನುಜರೆಂದರಿದರೆ
ಪೊಂದುವರು ಮಹದಾದಿ ನಿರಯದಲ್ಲಿ
ಸಂದರುಶನದಿಂದ ಸಕಲ ದೋಷದೂರ
ಇಂದಿರೆಅರಸನು ಇಪ್ಪುವ ಇವರಲ್ಲಿ
ಬಂದಬಂದವರ ಅಭೀಷ್ಟವ ಪೂರೈಸಿ
ನಿಂದು ಮೆರೆವ ವಸುಧೇಂದ್ರಮುನಿಯ ಮನ-
ಮಂದಿರದೊಪ್ಪುವ ರಾಮ ಗೋಪಾಲವಿಠಲ
ಬಂಧಕಮೋಚಕ ಮಾಳ್ಪ ಶಕ್ತ

## ಝಂಪೆತಾಳ

ನಿನ್ನ ನಾಮ ಒಮ್ಮೆ ಸ್ಮರಿಸಿದಡಾಯಿತೆ
ಘನ್ನ ದುರಿತಗಳೆಲ್ಲ ದೂರಾಗಿ ಪೋಗುವುವು
ನಿನ್ನ ಮೂರುತಿ ಒಮ್ಮೆ ನೋಡಿದಡಾಯಿತೆ
ಜನುಮಾದಿಗಳು ಜಡಕ್ಲೇಶಗಳು ತರಿವುವು
ನಿನ್ನ ಅವಯವಗಳು ಎಲ್ಲಿ ನೋಡಲು ಪೂರ್ಣ
ನಿನ್ನ ಬಳಿಯಲ್ಲಿ ಸಕಲಾದಿ ತೀರ್ಥಗಳುಂಟು
ನಿನ್ನ ಓಲೈಸುತ್ತ ಸುರರಿಪ್ಪುವರು
ಘನ್ನ ಮಹಾಮಹಿಮ ಮೂಲರಾಮ
ನಿನ್ನ ಪರಿವಾರಸಹಿತ ಎನ್ನ ಗುರು ವಸುಧೇಂದ್ರ
ಮುನ್ನೆ ನಿನ್ನರ್ಚಿಸುವ ಭಾಗ್ಯವೆಂತೊ
ಚಿನುಮಯಮೂರುತಿ ಗೋಪಾಲವಿಠಲ
ನಿನ್ನ ಭಕುತರು ನಿನ್ನ ಮಹಿಮೆಗೆ ನಮೋ ೪

## ತ್ರಿಪುಟತಾಳ

ಶರಣರ ಪಾಲಕ ದುರುಳರ ಶಿಕ್ಷಕ
ಶರಣು ಶರಣು ನಿನ್ನ ಚರಣ ಕಮಲಕೆ
ಪರಮಪಾವನನಾಮ ಪರಿಪೂರ್ಣಗುಣಕಾಮ
ಸ್ಥಿರಯೋಗಿಗಳರಸ ಸ್ಥಿರಜೀವಿಯೊ
ದುರಿತಗಿರಿಗೆ ಕುಲಿಶ ದೂರ ಅತಿದೂರ
ಚರಣದಂದುಗೆ ಗೆಜ್ಜೆ ವರ ಜಾನು ಜಂಘೆ ಕಟಿ-
ಕರ ಮೇಲೆ ಒಲಿವ ಕಿಂಕಿಣಿಯ ಗಂಟೆ
ಪರಮಶೋಭಿತದ ಉದರ ವಕ್ಷಕೌಂಸ್ತುಭ
ಕೊರಳಪದಕ ನಾನಾ ಸರಗಳಿಂದೊಪ್ಪುತ
ಸಿರಿಗಂಧ ಕಸ್ತೂರಿ ಪರಿಮಳಭೂಷಿತ
ವರ ಸಾರಂಗಪಾಣಿ ಕರ್ಣಕುಂಡಲಧರ

ಸರಸಿಜನಯನ ಸಿರಿಕಿರೀಟಧರ
ಸ್ವರೂಪಾಲಂಕಾರದಿಂದೊಪ್ಪುವ ಶ್ರೀರಾಮ
ಪರಮಶೋಭಿತನಾಮ ಗೋಪಾಲವಿಠಲ
ನಿರುತ ವಸುಧೇಂದ್ರ ಮುನಿಯ ಮನದಿ ವಾಸ ೫

## ಅಟ್ಟತಾಳ

ನಿತ್ಯ ಅನಿತ್ಯ ಜಡದಲಿಪ್ಪುವನು ನೀನೆ
ವ್ಯಕ್ತ ಅವ್ಯಕ್ತನಾಗಿದ್ದು ಈ ಧರೆಯ
ಭಕ್ತರುಗಳಿಗೆ ನೀ ಬಲ್ಲಂತೆ ತೋರುತ್ತ
ಮರ್ತ್ಯಲೋಕದಿ ಬಂದು ಈ ಪ್ರತಿಮೆ
ಅಂತರ್ಗತನಾಗಿ ಇದ್ದು ನಿತ್ಯ ಉತ್ಸವಗಳು
ಭಕ್ತರಿಂದಲಿ ಕೊಂಡು ಬಹು ಧರ್ಮದಿಂದಲಿ
ನಿತ್ಯ ವಸುಧೇಂದ್ರ ಹೃತ್ಕಮಲದಿ
ತತ್ತಳಿಸುತ್ತ ಮೆರೆವ ಸಿರಿರಾಮ
ಮುಕ್ತಿಪ್ರದಾಯಕ ಗೋಪಾಲವಿಠಲ
ಚಿತ್ತಶುದ್ಧನ ಮಾಡು ಭಕ್ತಿಜ್ಞಾನವ ನೀಡು ೬

## ಆದಿತಾಳ

ದುರಿತದೂರ ದುಃಖನಾಶ
ಕರುಣಾಕರ ಕಪಟರಹಿತ
ಶರಣಪಾಲ ಸಿರಿಯರಸ
ಗರುಡಗಮನ ಗರ್ವರಹಿತ
ಸರಸಿಜಾಕ್ಷ ಸರ್ವೋತ್ತಮ
ಸಾರಭೋಕ್ತ ಸರ್ವವ್ಯಾಪ್ತ

ಕಾರಣನೆ ಕರ್ಮರಹಿತ
ಭಾರಕರ್ತ ಭಯನಿವಾರಣ
ತಾರಕನೆ ತ್ರಿಗುಣದೂರ
ಮಾರನಯ್ಯ ಮಧುಸೂಧನ
ಮಾರುತೀಶ ಮಾಯಾರಹಿತ
ಜಾರಚೋರ ಜನ್ಮರಹಿತ
ಧೀರ ಶೂರ ದಿವ್ಯವಿಗ್ರಹ
ಪರಮಪುಣ್ಯ ಪರಿಪೂರ್ಣ
ಸುರಾದಿವಿನುತ ಗೋಪಾಲವಿಠಲ
ಗುರು ವಸುಧೇಂದ್ರಮುನಿಯ ಈಶ ೭

## ಜತೆ

ಗುರು ವಸುಧೇಂದ್ರರ ಕರಕಮಲದೊಳು ತೋರ್ಪ
ಸಿರಿರಾಮ ಗೋಪಾಲವಿಠಲ ಶರಣು ಶರಣು ೮

■ ■ ■

## ೨೭

ವಸುಧೇಂದ್ರ ರಾಯಾ ಪಾವನಕಾಯಾ ಕೋವಿದಜನಪ್ರಿಯಾ ಪ
ಭೂವಲಯದೊಳತಿ ತೀವಿದ ಅಘವನ ಪಾವಕನತಜನ
ದೇವತರುವೆನಿಪ ಅ.ಪ.
ಜಿತಕ್ರೋಧ ಜಯಶೀಲಾ ದುರ್ವ್ಯಸನಪರ್ವತವಜ್ರ ಹರಿಲೋಲಾ

ರತಿಪತಿ ಮಾರ್ಗಣ ಮದನ ಮೌನೀಶ ವಾಂಛಿತ ಫಲಪಿತ್ತು ಸಂ-
ತತ ಪಾಲಿಸುವುದೆಮ್ಮಾ ಪಿತತ ಪಾವನ ಪಿತತ ಕರುಣಾಮೃತ ರಸಾಂಚಿತ
ಸತತ ಸೇವಾಮತಿರತಾಸತ ಹಿತಕರಾಗಮ ತತಿಪಯೋಚಾರ್ಶ ಅತಿಮುದಾ ೧

ಭೂದೇವಾಸುತಮಹಿಮಾ ಶಾತವಾಸುಭೀಮಾ ವೇದಪೂಜಿತ ರಾಮಾ
ವೇದವ್ಯಾಸರ ಪಾದಸಾದರದಲಿ ನಿತ್ಯಾರಾಧಿಸುತಿಹ ಸುಪಿ -
ನೋದಚರಿತಗುರು ಮೋದತೀರ್ಥ ಮತಾಬ್ಧಿ ಸೋಮಕುವಾದಿಮತ ಮತ್ತೇಭ
ಕುಂಭ-
ದರಾಧರಾ ಧರಜಾತಟ ವಾಸುಗ ರೋಳಿನಾದರಿಸುವದಖಿಳ ಗುಣಾಂಬುಧೇ ೨

ಸರಸಭಾಸೋಲ್ಲಾಸಾ ವರ್ಜಿತದೋಷಾ ಹರಿನಿಭಸಂಕಾಶಾ ಶರೀರಾ ಸಜ್ಜನಗೇಯಾ
ಗುರು ವಾದೀಂದ್ರಕರ ಸರಸೀರುಹ ಸಂಜಾತಾ ನಿರುಪಮನಿರ್ಭೀತಾ
ಸುರಚಿತ ಹಿಮಕಿರಣಾ ತೇಜಸ್ಫುರಣಾ ಶ್ರೀಜಗನ್ನಾಥ ವಿಠಲನ ಚರಣಾಪಂ-
ಕೇರುಹ ಯುಗಳಮಧುಕರದುರಿತ ಘನ ಮರುತಾ ೩

■ ■ ■

## ೨೮

**ವಂದನೆ ಮಾಡಿರೈ ವಸುಧೇಂದ್ರರ ಪಾಡಿರೈ** ಪ.
ಇಂದಿರೆ ಪತಿ-ಪದ ಮಂದಜ ಮಧುಕರ
ಗಂಧವಾಹನಮತ ಮಂದದಿಚಂದಿರ ಅ.ಪ.
ಗುರು ವಾದೀಂದ್ರರ ಕರಕಮಲೋಭನನೀತ / ವಿಧಿಕುಲಜಾತ
ಧರಣೀಜರಮಣನ ಚರಣ ಸುಮರಾರ್ಚಕನೀತ / ಶಾಸ್ತ್ರಕಲಾಪ
ವರದೇಂದ್ರಾರ್ಯರ ಹೃದಯಸರೋರುಹನಿಲಯ। ರವಿಗಣಗೇಯ
ವರಹಜ ಕೆಂಡನ ಗಿರಜೇಟದೊಳಗೆ ಯಿರುವ । ಶರಣರ ಪೊರೆವ ೧

ಮಧ್ವಮತಾಗಮಪದ್ಮಗಳಿಗೆ ಮಾರ್ತಾಂಡ । ಧೃತಕರದಂಡ

ಅದ್ವೈತಕಾಟವಿ ಕೃದ್ವಾನಲ ಸಮತೇಜ । ನರಸುತಭೋಜ
ಸದ್ವಿದ್ಯಾಂಬುಧಿಯೊಳು ವಿಹರಿಪ ಪಾಠೀಣ । ತೀರ್ಥಪ್ರವೀಣ

ಸದ್ವೈಷ್ಣವತತಿ ಕೈರವವನಕರಾಬ್ಜ । ವಂದ್ಯಪದಾಬ್ಜ ೨
ಆನತಭಕ್ತಜನಾಮಯಧ್ವಾರಿತ ಪತಂಗ । ಭರ್ಮಸಮಾಂಗ
ದಾನಜ ದಿನಕರ ತನಯನ ಮರೆಸಿದ ದಾತ । ಜಗದೊಳು ಖ್ಯಾತ
ಆನಕ ದುಂದುಭಿಸೂನು ಕಥಾಮೃತ ಸಾರಗರೆದ ಉದಾರ-
ಮಾನದ ಅಭಿನವಪ್ರಾಣೇಶವಿಠಲನ ದಾಸ ಭೇಷಪ್ರಕಾಶ ೩



# ೧೪. ಶ್ರೀ ವರದೇಂದ್ರತೀರ್ಥರು

( ೧೭೬೧-೧೭೮೫ )

ಇವರ ಕಾಲದಲ್ಲಿ ಶ್ರೀ ಮಠವು ಸರ್ವಾಂಗೀಣ ಪ್ರಗತಿ ಹೊಂದಿತೆಂಬುದನ್ನು ಮೊದಲಿಗೆ ಕಾಣಿಸತಕ್ಕುದು. ನಾನಾ ಕಡೆಗಳಿಂದ ಉಂಬಳಿ, ಜಮೀನುಗಳು ದಾನವಾಗಿ ಬಂದಿದ್ದು, ಅವುಗಳಲ್ಲಿ ಕೆಲವನ್ನು ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್( ೧೯೨೯ )ನಲ್ಲಿ ದಾಖಲಿಸಲಾಗಿದೆ.

ಹಲವಾರು ಮಹತ್ವದ ಘಟನೆಗಳು ಜರುಗಿದವು.

ಮೊದಲನೆಯದು, ಹರಿದಾಸರಿಗೆ, ಹರಿದಾಸ ಸಾಹಿತ್ಯಕ್ಕೆ ಶ್ರೀಮಠದಲ್ಲಿ ದೊರೆತ ವಿಶೇಷ ಮನ್ನಣೆ. ಎರಡನೆಯದಾಗಿ ಲಿಂಗಸುಗೂರಿನಲ್ಲಿ ಅವರಿಗಾಗಿ ಏರ್ಪಡಿಸಿದ್ದ ವಿಶೇಷ ಸಮಾರಂಭ. ಮೂರನೆಯದು ಉತ್ತರಾಧಿಮಠದ ಶ್ರೀ ಸತ್ಯಬೋಧರೊಂದಿಗಿನ ಸಂಬಂಧ. ಕೊನೆಯದಾಗಿ ಪುಣೆಯಲ್ಲಿ ನಡೆದ ವಾಕ್ಯಾರ್ಥ.

ವಿಜಯದಾಸರ ( ೧೬೮೭-೧೭೫೫ ) ಅನಂತರ ಒಗೆತಂದ ಜಗನ್ನಾಥದಾಸ, ಮೋಹನದಾಸ, ಪ್ರಾಣೇಶದಾಸ ಮೊದಲಾದ ಹರಿದಾಸರು ಶ್ರೀಗಳವರೊಡನೆ ವಿಶೇಷ ಸಂಪರ್ಕ ವನ್ನಿಟ್ಟುಕೊಂಡಿದ್ದರು. ಇವರುಗಳನ್ನು ಶ್ರೀ ವರದೇಂದ್ರರು ಆತ್ಮೀಯ ಅಭಿಮಾನದಿಂದ ಕಾಣುತ್ತಿದ್ದುದೇ ಕಾರಣವಾಗಿದೆ. ಪರಿಣಾಮವಾಗಿ ಶ್ರೀಗಳ ಸಮಕಾಲೀನ ಹಾಗೂ ಅನಂತರದ ಅನೇಕ ಹರಿದಾಸರುಗಳು ವರದೇಂದ್ರ ಯತಿಗಳನ್ನು ಕುರಿತು ರಚಿಸಿದ ಹಾಡುಗಳು ಮೂವತ್ತೈದಕ್ಕೂ ಮಿಕ್ಕಿವೆ! ( ಇಲ್ಲಿ ಪ್ರಾತಿನಿಧಿಕ ಸ್ವರೂಪದ ೧೧ ಹಾಡುಗಳನ್ನು ಮಾತ್ರ ಕೊಟ್ಟಿದೆ. ) ಸ್ವತಹ ವರದೇಂದ್ರರೇ 'ತಂತ್ರಸಾರ'ವೆಂಬ ದೇವಪೂಜಾ ಪದ್ಧತಿಯ ಚಿಕ್ಕ ಕೃತಿಯನ್ನೂ ರಚಿಸಿದ್ದಾರೆ. ಇಲ್ಲಿ 'ಬ್ಯಾಗವಾಟದ ರಂಗನೊಲಿದ ಶ್ರೀ ನರಸಿಂಹ ಭಾಗವತರಣುಗ ಜಗನ್ನಾಥದಾಸ ಬಾಗಿ ವಿಜ್ಞಾಪಿಸಲು ಕೈಕೊಂಡು ಪೇಳಿದೆವು' ಎಂಬ ಮಾತು ಬರುತ್ತದೆ ಯಾದ್ದರಿಂದ ಇದರ ರಚನೆಗೆ ಆ ದಾಸರು ನಿಮಿತ್ತರೆಂದ ಹಾಗಾಯಿತು. ಇತ್ತ ಜಗನ್ನಾಥದಾಸರು ವರದೇಂದ್ರ ಪಂಚರತ್ನ ಮಾಲಿಕೆ' ಎಂಬುದನ್ನು ರಚಿಸಿದರಾಗಿ ಉಲ್ಲೇಖವಿದೆ. ( ಅದು ಯಾವುದೆಂಬುದು ಸ್ಪಷ್ಟವಾಗಿ ತಿಳಿಯದು. )

ಶ್ರೀಗಳವರೊಡನೆ ಪ್ರಾಣೇಶದಾಸರ ಸಂಬಂಧ ಘನಿಷ್ಠವಾಗಿ ಒದಗಿ ಬಂತು. ಲಿಂಗಸುಗೂರಿನ ಶಾನುಭೋಗ ಯೋಗೀಂದ್ರರಿಂದ ಆಮಂತ್ರಿತರಾದ ಶ್ರೀಗಳವರು ಅತ್ಯಪೂರ್ವ

ವೈಭವದಿಂದ ಪೂಜಾದಿಕರ್ಮಗಳನ್ನು ಅವರ ಮನೆಯಲ್ಲಿ ಜರುಗಿಸಿದರು. ಆ ಪ್ರಸಂಗವನ್ನು ಪ್ರಾಣೇಶದಾಸರು 'ಹೀಂದಿನ ಸುಕೃತವೇಸು ಬಂದೊದಗಿದವ್ಹೊ ವರದೇಂದ್ರರಾಯ ಬಂದ ನಮ್ಮ ಮಂದಿರಕಿಂದು' ಎಂಬ ಕೀರ್ತನೆಯಲ್ಲಿ ಮನದುಂಬಿ ಬಣ್ಣಿಸಿದ್ದಾರೆ. ಪೂಜಾದಿಗಳು ಮುಗಿದ ಮೇಲೆ ಶ್ರೀಗಳು ದಕ್ಷಿಣೆಯ ರೂಪದಲ್ಲಿ ಹಿತ್ತಲಿನ ಜೋಳದ ದಂಟಿನ ಬಣವಿ ಬೇಕೆಂದು ಕೇಳಿದಾಗ ಯೋಗೀಂದ್ರರಾಯರಿಗೆ ಆಶ್ಚರ್ಯ. ಒಪ್ಪಿದರು. ಹರಿದಾಸರೇ ಆದರು. ಮುಂದೆ ಜಗನ್ನಾಥದಾಸರು ಬಂದಾಗ ಅವರಿಗೆ 'ಪ್ರಾಣೇಶ ವಿಠಲ' ಎಂಬ ಅಂಕಿತವನ್ನಿತ್ತರು.

ಶ್ರೀ ವರದೇಂದ್ರ, ಶ್ರೀ ಧೀರೇಂದ್ರರ ಕಾಲಕ್ಕೆ ಉತ್ತರಾದಿ ಮಠದಲ್ಲಿ ಶ್ರೀ ಸತ್ಯಬೋಧರು ಪೀಠಸ್ಥರಾಗಿದ್ದರು. ಹಿರಿಯ ಸ್ಥಾನದಲ್ಲಿದ್ದವರು. ಹೀಗಾಗಿ ಇವರುಗಳು ಮೇಲಿಂದ ಮೇಲೆ ಭೆಟ್ಟಿಯಾಗುತ್ತಿದ್ದರು. ಶ್ರೀ ಸತ್ಯಬೋಧರು ಮತ್ತು ಧೀರೇಂದ್ರರು ಹಾಗೂ ಆ ಕಾಲದ ಹರಿದಾಸ ಶ್ರೇಷ್ಠರಾದ ಜಗನ್ನಾಥದಾಸರು, ಕರ್ಜಗಿಯ ಶ್ರೀದವಿಠಲರು ಜೊತೆಗೂಡುತ್ತಿದ್ದರು. ಇದೊಂದು ಚಾರಿತ್ರಿಕವಾಗಿ ಮಹತ್ವದ ಅಂಶವೆನ್ನಬೇಕು.

ಸಂಚಾರತ್ವೇನ ಶ್ರೀ ವರದೇಂದ್ರರು ಪುಣೆಗೆ ಬಂದರು. ಪೇಶ್ವೆಯವರು ಆಳುತ್ತಿದ್ದ ಆ ದಿನಗಳಲ್ಲಿ ಪ್ರಭುಣೆ ರಾಮಶಾಸ್ತ್ರಿ ಎಂಬ ಅಸಾಮಾನ್ಯ ಅದ್ವೈತ ಪಂಡಿತರಿದ್ದರು. ವಾಕ್ಯಾರ್ಥದ ವ್ಯವಸ್ಥೆಯಾಯಿತು. ಪಣಬಂಧವಾಗಿ, ಶ್ರೀಗಳು ಸೋತರೆ ತಮ್ಮೆಲ್ಲ ಬಿರುದು-ಪದವಿಗಳನ್ನೂ ಒಪ್ಪಿಸಬೇಕು; ರಾಮಶಾಸ್ತ್ರಿಗಳು ಸೋತರೆ, ತಾನಿದ್ದ ಮನೆಯನ್ನು ಶ್ರೀಗಳಿಗೆ ಬಿಟ್ಟುಕೊಟ್ಟು ತಾನು ದೇಶಾಂತರಕ್ಕೆ ಹೋಗಬೇಕು.

ವಾಕ್ಯಾರ್ಥ ಆರಂಭವಾಗಿ ಒಂದೆರಡು ದಿನ ಕಳೆದಿರಬೇಕು. ಆಗ ಶ್ರೀಗಳವರ ಕಕ್ಕನ ಮಗ - ಹಿರಿಯಣ್ಣನಂತಿದ್ದ - ಜಯರಾಮಾಚಾರ್ಯರು ಅಲ್ಲಿಗೆ ಆಗಮಿಸಿದರು. ( ಆ ಮುಂದೆ ಶ್ರೀ ಧೀರೇಂದ್ರರು ). ಶ್ರೀಗಳವರಿಗೆ ಬಲಬಂದಂತಾಯಿತು. ಹಲವು ದಿನಗಳ ವರೆಗೆ ನಡೆದ ಚರ್ಚೆಯಲ್ಲಿ ರಾಮಶಾಸ್ತ್ರಿಗಳು ಸೋತದ್ದೂ ಆ ಮನೆಯನ್ನು ಶ್ರೀಗಳಿಗೆ ಬಿಟ್ಟುಕೊಟ್ಟದ್ದು ಸತ್ಯಸಂಗತಿಗಳೇ. ಇಡೀ ಘಟನೆಯನ್ನು ವರದೇಶವಿಠಲರು 'ರಾಮನ ಗೃಹವೀರಾಮಗಾಯ್ತು. ಆ ರಾಮಗೆ ವಿರಾಮವಾಯ್ತು' ಎಂದು ಸೊಗಸಾಗಿ ವರ್ಣಿಸಿದ್ದಾರೆ. ( ಕೀ. 33 )

ಶ್ರೀಗಳವರು, ಅದೇನು ನಿಮಿತ್ತವೊ ಗ್ವಾಲಿಯರ್ ಸಂಸ್ಥಾನಕ್ಕೆ ಹೋದರು. ಅಲ್ಲಿಯ ಮಹಾರಾಜನು ಅವರ ಶಿಷ್ಯತ್ವವನ್ನೂ ವಹಿಸಿದನು. ಹಾಗೂ ಶ್ರೀಗಳವರ ಎರಡು ತೈಲಚಿತ್ರಗಳನ್ನು ಆಸ್ಥಾನದ ಕಲಾವಿದರಿಂದ ವಿರಚಿಸಿ ಅರಮನೆಯಲ್ಲಿ ತೂಗು ಹಾಕುವ ವ್ಯವಸ್ಥೆ ಮಾಡಿದನು. ಆ ತೈಲಚಿತ್ರಗಳು ಈಗೂ ಅಲ್ಲಿ ಇವೆಯಂತೆ. ಅನಂತರ ಅವರದು ದಕ್ಷಿಣದತ್ತ

ಪಾದಯಾತ್ರೆ. ಚನ್ನಗಿರಿ ಮುಂತಾದ ಕಡೆ ಶ್ರೀ ಗುರುರಾಜರ ವೃಂದಾವನ ಸ್ಥಾಪಿಸಿದರು. ( ಮಠದ ವತಿಯಿಂದ ಸ್ಥಾಪಿತವಾದ ವೃಂದಾವನಗಳಲ್ಲಿ ಇದು ಐದನೆಯದೆಂಬ ವದಂತಿಯಿದೆ. ಈ ಹಿಂದಿನವು ಉಡುಗಣಿ, ಹೊನ್ನಾಳಿ ಇತ್ಯಾದಿ. )

ಶ್ರೀಗಳವರಿಗೆ ಪುಣೆಯು ತುಂಬಾ ಹಿಡಿಸಿರಬೇಕು. ವೃದ್ಧಾಪ್ಯದ ಕೆಲ ಕಾಲವನ್ನೂ ಅಲ್ಲಿಯೇ ಕಳೆದರು. ೧೭೮೫ರ ಆಷಾಢ ಶುದ್ಧ ೭ರಂದು ವೈಕುಂಠಕ್ಕೆ ನಿರ್ಗಮಿಸಿದರು. ಅವರ ವೃಂದಾವನವು ರಾಮಶಾಸ್ತ್ರಿಗಳಿದ್ದ ಮನೆಯಲ್ಲಿಯೆ ( ಲಕ್ಷ್ಮೀ ರೋಡ್ ) ಇದೆ.

ಶ್ರೀ ವರದೇಂದ್ರರ ಹೆಸರಿನಲ್ಲಿ 'ಸ್ವಪ್ನ ವೃಂದಾವನಾಖ್ಯಾನ' ಎಂಬುದನ್ನು ವರದೇಶವಿಠಲರು ರಚಿಸಿದ್ದಾರೆ. ಶ್ರೀಗಳು ಸ್ವಪ್ನದಲ್ಲಿ ಸೂಚಿಸಿದ ಪ್ರಕಾರ, ಆ ದಂಟಿನ ಬಣಿವೆಯನ್ನು ತೆಗೆಸಿ ನೋಡಿದಾಗ ಒಂದು ತುಳಸೀಗಿಡ ನಳನಳಿಸುತ್ತಿದ್ದಿತು. ಅಲ್ಲಿಯೇ ಶ್ರೀ ವರದೇಂದ್ರರ ಮೃತ್ತಿಕಾವೃಂದಾವನವನ್ನೂ ನೆಲೆಗೊಳಿಸಲಾಯಿತು. ಪ್ರಾಣೇಶವಿಠಲರ ಸಾಧನೆಯಿಂದ ಅದೊಂದು ಪವಿತ್ರ ಸ್ಥಳವಾಗಿ ಇಂದಿಗೂ ಪೂಜಾದಿ ಸಲ್ಲುತ್ತಲಿದೆ.

■ ■ ■

## ೨೯

**[ರಾಗ: ತೋಡಿ, ವಿಳಂಬಟ್ಟಿ ತಾಳ]**

**ವರದೇಂದ್ರ ಯತಿಚಕ್ರವರ್ತೀ । ನಿರಂತರ ವರ್ಣಿಸುವೆ ನಿಮ್ಮ ಕೀರ್ತಿ**
ಪರಮ ಕರುಣೀ ನಿನ್ನಾ ಚರಣ ಕಮಲ ಯುಗ್ಮ -
ಕ್ಕೆರಗಿ ಬೇಡುವೆ ವರವಾ ಎಮ್ಮನು ಪೊರೆವಾ ಪ

ನತಜಾನ ಬಂಧು ನೀನೆಂದು ತಿಳಿದೂ। ನುತಿಶಿದೇ ಗುಣಗಣಾ ಶಿಂಧೂ
ಪ್ರತಿಗಾಣೆ ನಿಮಗೆ ಸೂವ್ರತಿವಾರ ಪ್ರಣತಾ ಕಾ-
ಮಿತ ಕಲ್ಪತರುವೆ ನಿರ್ಜಿತ ಮಾರ ಮಾರ್ಗಣಾ
ಕ್ಷಿತಿಪರಿಗೆ ಪ್ರತಿ ದಿನದಿ ಪರಮಾ। ದ್ಭುತವೆನಿಸುವದು ನಿಮ್ಮ ದಾನ
ಪ್ರತತಿ ಸಾಂಪ್ರತು ಮೃದು ಮಧುರ ವಚನಾಶಾಸ್ತ್ರ ಪ್ರವಚನಾ ೧

ಮರುತಾ ಮತಾಂಬುಧಿ ಚಂದ್ರಾ। ಚಾಮಿಕರಾವರ್ಣಾ ಸರಸ ಕವೀಂದ್ರಾ।
ಪರವಾದಿ ತಿಮಿರ ಭಾಸ್ಕರ ವಸುಧೀಂದ್ರಾ ಸ-।

ದ್ಗುರು ಕರಸಂಜಾತ ನಿರುಪಮಾ ನಿರ್ಭೀತಾ
ಖರಮಥನ ಪದ ಕೋಕನದ ಮಧು ಕರ ಕೃಪಾಕರ ಕರವ ಪಿಡಿದು -
ದ್ಧರಿಸುವದು ಭೂಸುರ ಕುಲೋತ್ತಂಸಾ ॥ ನಮೋ ಪರಮಹಂಸಾ ೨

ಕಲಿತಾ ಸುಂದರ ಮಂದಹಾಸಾ। ಹೇ ನಿಷ್ಕಲುಷ ಸುತತ್ವ ವಿಲಾಸಾ
ಗಳಿತಾಘ ಸಂಘ ನಿಶ್ಚಲ ಜಗನ್ನಾಥವಿಠಲ
ನೊಲಿಮಿಯ ಪಡದಿಳಿಯೊಳು ಚರಿಸೂವಾ
ಭಳಿರೆ ಪ್ರತಿಯೋಗಿಗಳೆನಿಪ ಕರಿಕಲಭ ಕೇಸರಿ ನಿಮ್ಮ ದಾಸ -
ರೊಳೊಲಿದು ಪಾಲಿಪದನವರತ ಎನ್ನಾ॥ ನಂಬಿದೆನೊ ನಿನ್ನಾ ೩

■ ■ ■

## ೩೦

**[ರಾಗ: ಭೈರವಿ, ಆಟತಾಳ]**

**ಹಿಂದಿನ ಸುಕರ್ಮವೇಸು ಬಂದೊದಗಿದವೋ - ವರ -**
ದೇಂದ್ರರಾಯ ಬಂದ ನಮ್ಮ ಮಂದಿರಕಿಂದು ಪ

ಮುತ್ತಿನ ಅಂದಣದೊಳು ಸತ್ತಿಗಿ ನೆರಳಿಲಿ ಪ್ರ -
ಶಸ್ತವಾಗಿ ವೇದ ಶಾಸ್ತ್ರವೊತ್ತಿ ವೋದುವ ।
ಉತ್ತಮ ಬುಧರ ಕೂಡ ಭೃತ್ಯರ ಸಂಗಡ ಬಹು।
ಹತ್ತೆಂಟು ಬಿರುದಾವಳಿಯುಕ್ತ ಬಂದರು ೧

ತಂಡ ತಂಡಕ್ಕೆ ಜನರು ಹಿಂಡುಗೂಡಿ ಫಲಗಳ
ಕೊಂಡು ಬಂದು ಮಾಡುವರು - ದಂಡಪ್ರಣಾಮ।
ಪಂಡಿತಾಗ್ರಗಣ್ಯರು ಭೂಮಂಡಲದೊಳಾಗ ಶ್ರೀಯಾ ।
ಖಂಡಲನಂತೆ ತೋರ್ವಾ ಕಮಂಡಲಧರ ೨

ಶ್ರೀಕರ ಪ್ರಾಣೇಶವಿಠಲನೇಕಾಂತದಿ ಒಲಿಸುವಲ್ಲಿ
ಈ ಕುಂಭಿಣಿಯೊಳಗೀತಗೆ ಕಾಣೆ ನೀಡ ।
ನೀ ಕಾಯಬೇಕೆಂದವರ ಶೋಕವ ಪರಿಹರಿಸಿ
ಜೋಕೆಮಾಡುವ ನಿತ್ಯದೇಶಿಕ ಕುಲಪತಿ ೩

## ೩೧

[ರಾಗ:  ತಾಳ ತ್ರಿವಿಡಿ]

ವರದೇಂದ್ರಾರ್ಯರ ಪಾದ । ಸರಸಿಜಯುಗ ಮನೋ-
ಸರಸಿರುಹದಿ ಭಜಿಪೆ ಪ.
ಶರಣನ ಗೋಸುಗ ವರದೇಶವಿಠಲೆಂದು
ಅರುಹಿ ಮುದ್ರಿಕೆ ನೀಡೆಂದು ಪೇಳಿದನಂದು ಅ.ಪ.
ತನ್ನ ಯೋಚನಿ ಬಿಡು । ಅನ್ಯ ಜನರ ಚಿಂತೆ
ಯನ್ನದಿ ದಿನ ದಿನದಿ
ಘನ್ನವಾದದು ನೋಡಿ । ನಿನ್ನ ಮುಖದಿ ತತ್ವಾ -
ವನ್ನು ತಿಳಿಸಿ ಉದ್ಧಾರಾ
ಮಾಡುವೆ ಸತ್ವಾರಾ ೧
ಕನಸಿನೊಳಗೆ ಪೇಳಿದ । ಘನ ಮಹಿಮರಾ ವಾಕ್ಯ
ಮನದಲ್ಲಿ ಯೋಚಿಸಿದಾ-
ದಿನಗಳಿಯದೇ ತ್ವರ । ನಿನಗೆ ತಿಳಿಸು ಯೆಂದು
ವಿನಯದಿ ಪಿಡಿದಾ ಕೈಯಾ
ಮುನಿರಾಯಾ ೨
ಪುಟ್ಟನಿವನು ಬಲು। ಘಟ್ಟಿಗನಾಗುವ
ಇಷ್ಟ ದಾಸರ ಮತದಿ
ಧಿಟ್ಟ ಗುರುಜಗನ್ನಾಥವಿಠಲ ಒಲಿದೀಗಾ
ಇಷ್ಟ ಪುರೈಸಿ ಕೊಡುವಾ
ದುರಿತವ ತರಿವಾ ೩

# ೩೨

## [ ಸುಳಾದಿ ]

### ಧ್ರುವತಾಳ

**ವಂದಿಸುವೆನು ಭವಮಂದಧಿತಾರಕ**
ಸಿಂಧುಶಯನ ರಾಮಚಂದ್ರನಾರ್ಚಕ ವಸು
ಧೇಂದ್ರರಾಯರ ಕರಮಂದೋದ್ಭವ ವರ -
ದೇಂದ್ರರಾಯನೆ ಯತಿಚಂದಿರನೆ
ಇಂದು ಪ್ರಾರ್ಥಿಪೆ ಕರ್ಮಂದಿಗಳರಸನೆ
ಕಂದರ್ಪಜಿತಶರ್ಮ ವೃಂದಸೇವ್ಯ
ಬೆಂದು ಭವದಿ ಬಹು ನೊಂದಿರುವೆನೋ ಸ್ವಾಮಿ
ಮುಂದಾರಿಗಾಣದೆ ಕುಂದಿರುವೆ
ಬಂದು ಬೇಗನೆ ದಯದಿಂದ ಪಿಡಿಯೊ ಕಯ್ಯ
ತಂದೆಯಭಿನವಪ್ರಾಣೇಶವಿಠಲ ಪ್ರೀಯ ೧

### ಮಟ್ಟತಾಳ

ಕೋಲಜಕೂಲದ ಆಲಯವಾಸರಿಂ -
ದೇಳನೆ ಯತಿಯನಿಸಿ ಕಾಲರಾಮರಾಜ್ಯ
ಪಾಲಿಸಿ ವಿಭವದಲಿ ಮೂಲರಾಮಚರಣ
ಊಳಿಗವನು ಗೈದ ಶೀಲಸುಗುಣಮಣಿಯೇ
ಕಲಾಭಿನವಪ್ರಾಣೇಶವಿಠಲಪಾದ
ಕೀಲಾಲಜ ಮಧುಪ ಲಾಲಿಸು ಬಿನ್ನಪ

## ತ್ರಿವಿಡಿತಾಳ

ಭೂತಳದೊಳು ಮಹಾಪಾತಕಿ ನಾನಯ್ಯ
ಘಾತಕನು ಇತ್ತ ಮಾತು ತಪ್ಪುವನಯ್ಯ ॥
ಆತುಮಭವಶಿವಾರಾತಿಯೆ ಶರದಿಂದ ।
ನೀತಿ ತೊರೆದು ವಂಶಖ್ಯಾತಿ ಮರೆದು ॥
ಸೀತಾಂಶುಮುಖಿಯರ ಪ್ರೀತಿ ಚಿಂತನೆಯಲ್ಲಿ ।
ಬಾತುಗೋಳಿಯ ತೆರ ತಿರುಗಿದೆನೋ ದೇವ ॥
ಮಾತುಮಾತಿಗೆ ಯನ್ನ ಪೊಗಳಿಕೆ ಪೇಳುತ್ತ ।
ಖ್ಯಾತಿಕಾಮುಕನಾಗಿ ಕಾರ್ಯ ಮಾಡುವೆನಯ್ಯ ॥
ಈ ತೆರವಾಗಿದೆ ಯನ್ನಯ ಸ್ಥಿತಿಗತಿ ।
ಭೀತನಾಗಿರುವೆನು ಕರುಣಿಸಯ್ಯ ॥
ಸೀತಾಧಾಮಾಭಿನವ ಪ್ರಾಣೇಶವಿಠಲನ ।
ದೂತಾಗ್ರಣಿ ಯನ್ನ ಮಾತು ಲಾಲಿಸು ಜೀಯ ೩

## ಅಟ್ಟತಾಳ

ಭರಿತಕ್ರೋಧದಿಂದ ಪರವಶನಾಗುತ
ಥರಥರ ನಡಗುತ್ತ ಜರಿವೆನು ಸುಜನರ
ಪರಮವೈಷ್ಣವರ ಧರಣಿದೇವತೆಗಳ
ಹರಿದಾಸರ ನಿಂದ್ಯ ನಿರುತದಿ ಗಯ್ಯುತ್ತ
ಖರನಂತೆ ಭುವಿಯೊಳು ಚರಿಸುತಿರುವೆನಯ್ಯ
ಉರುತರವಾದಂಥ ದುರಿತರಾಶಿಯ ಬಾಯ್
ತೆರೆದು ಬರುತಲಿದೆ ಉರಿಯ ನಾಲಿಗೆ ಚಾಚಿ
ಬರುತಲಿದೆ ನೋಡು ಕರಿಮೋರೆ ಕೆಂಜಡೆ
ಧರಿಸಿ ಬರುತಲಿದೆ ಭರದಿಂದ ಬರುತಿದೆ
ಪರಿಹಾರೋಪಾಯವನರಿಯದೆ ಬಳಲುವೆ
ಪರಲುವೆ ಹಾಯೆಂದು ಚೀರುವೆ ಘೋರೆಂದು

ಪೊರೆವರನ್ಯರ ಕಾಣೆ ಕರಗಳ ಜೋಡಿಸಿ
ಶರಣುಬಂದಿರುವೆನು ಗುರುರಾಜ ರಕ್ಷಿಸು
ಶರಣನ ಪಿಡಿ ಕಯ್ಯಾ ವರದೇಂದ್ರ ಗುರುರಾಯ
ಮುರಗೇಡಿಯಭಿನವಪ್ರಾಣೇಶವಿಠ್ಠಲನ
ಚರಣವಾರಿಜಭೃಂಗ ನತದಯಾಪಾಂಗ ೪

## ಆದಿತಾಳ

ಆ ಮಹಾಮದದಿಂದ ಭ್ರಾಮಕತ್ರಯದಿಂದ
ಸೀಮೆಗಾಣದ ಲೋಭಮತ್ಸರದಂಭದಿಂದ
ತಾಮಸಿವರನಾದ ಪಾಮರ ನಾನಯ್ಯ
ಭಾಮಕಾಂಚನಮೇಣ್ ಭೂಮಿಯ ಚಿಂತನದಿ
ಯಾಮದಿವಸ ಕಾಲ ಹೋಮವಾಯಿತು ಸ್ವಾಮಿ
ಭೀಮಪ್ರೀಯಾಭಿನವಪ್ರಾಣೇಶವಿಠ್ಠಲನ
ನೇಮದಲರ್ಚಿಪ ಧೀಮಂತನತಿಶಾಂತನೆ ೫

## ಜತೆ

ದುರಿತಗಳೋಡಿಸು ಹರಿಕಥಾಮೃತ ಉಣಿಸು -
ದರಧರ ಅಭಿನವಪ್ರಾಣೇಶವಿಠಲದೂತ



## ೩೩

### [ ಅಶ್ವ ಧಾಟಿ : ಝಂಪೆ ತಾಳ]

ವೃಂದಾರಕೇಂದ್ರಯತಿ, ವೃಂದಾರಕೇಂದ್ರವೃತಿ, ವೃಂದಾರಕೇಂದ್ರ ಸುಮತಿ। ವೃಂದಾರಕೇಂದ್ರ ಕವಿ, ವೃಂದಾರಕೇಂದ್ರ ಭುವಿ, ವೃಂದಾರಕೇಂದ್ರ ವಿನುತ । ಕಂದರ್ಪಮಾರ್ಗಣಹಿ, ಕಂದರ್ಪವಾಹನವಿ, ಕಂದರ್ಪತಾತ ಪ್ರೀತ । ವಂದಾರುಜನವೃಂದ, ವೃಂದಾರಕಾವು ವರದೇಂದ್ರಾರ್ಯ ನೌಮಿ ಪಾಹಿ ॥ ೧ ॥

ವಸುಧೇಂದ್ರತೀರ್ಥಕರ, ಬಿಸಿಜೋದ್ಭವನೆ ಮೂಲ, ವಸುಧಿಜಾಪತಿಲೆಂಕನೆ । ಕಸವರಸವಮಾಭಾಂಗ, ವಸುಧಿದೇವೋತ್ತುಂಗ, ಕುಶಲಕರುಣಾಪಾಂಗನೆ ॥ ಅಸುನಾಥಮತಶರಧಿ, ಶಶಿದೇವನಂತೆಸೆವ, ಅಸಮ ಮಹಿಮೋಪೇತನೆ । ದಶಪ್ರಮತಿತತ್ವಗಳ, ದಶದಿಶದಿ ಪಸರಿಸಿದ, ಮಸಕರೀ ನೌಮಿ ಪಾಹಿ ॥ ೨ ॥

ಕಂಜಾಯತಾಕ್ಷಕರ ಕಂಜಾರಿಕಂಜಧರ, ಕಂಜಾಪ್ತಕುಲಭೂಷಣ । ಕಂಜಾಸನಾಹಿಸರ, ಕಂಜೋದರ ಸುಪರ್ಣ, ಕಂಜಾರ್ಕ ಸುರಪೂಜಿತ ॥ ಕಂಜಾತ ಕಲಶಕರ, ಕಂಜಾದಿರೂಪಧರ, ಕಂಜಾರಿ ಕುಲಚಂದಿರ । ಕಂಜಾಲಯಾರಮಣ, ಕಂಜೋದರನ ಚರಣ, ಕಂಜಾಳಿ ನೌಮಿ ಪಾಹಿ ॥ ೩ ॥

ತೀರ್ಥಧರನೇ ಸರ್ವ, ತೀರ್ಥಗಳ ಸಂಚರಿಸಿ, ತೀರ್ಥಪಾದನ ಪೂಜಿಸಿ । ತೀರ್ಥರಾನಂದಮತ, ತೀರ್ಥವನು ಭೂವಲಯು, ತೀರ್ಥದೊಳಗೆಲ್ಲ ಮೆರಿಸಿ। ತೀರ್ಥಾರ್ಥವಾದದಲಿ, ಪ್ರತ್ಯರ್ಥಿಗಳ ಜಯಿಸಿ, ತೀರ್ಥಸಿದ್ಧಾಂತ ನಿಲಿಸಿ। ತೀರ್ಥೋತ್ತಮರ ಚರಣ, ತೀರ್ಥಗಳಿಗರ್ಪಿಸಿದ, ತೀರ್ಥಗುರು ನೌಮಿ ಪಾಹಿ ॥೪॥

ಸುರರಾಜನಂತೆ ಭೂ, ಸುರಸ್ತೋಮ ಮಧ್ಯದಲಿ, ಮೆರೆವ ಗುರುಸಾರ್ವಭೌಮ । ದುರಿತಕಶ್ಮಲ ಘೋರ, ನಿರಯಗಳ ದಹಿಪುದಕೆ, ಸುರಮುಖನ ತೆರದೊಳಿರುವ । ಸರುವಸದ್ಧರ್ಮಗಳ, ನಿರುತ ಶಿಕ್ಷಿಸುವಲ್ಲಿ, ತರಣಿಸುತನಂತೆ ತೋರ್ವ । ನರವಾಹನವನೇರಿ, ಮೆರೆವ ಭೂಮಂಡಲದಿ, ಗುರುರಾಜ ನೌಮಿ ಪಾಹಿ ॥ ೫ ॥

ಪರಮುಸದ್ಗುಣಜ್ಞಾನ, ವಿರತಿಭಾಗ್ಯದಿ ರತ್ನಾಕರನಂತೆ ಪರಿಶೋಭಿಪ । ದುರಿತೌಘಪಾಸೀಯ ಧರಗಳೋಡಿಸುವಲ್ಲಿ, ಮಾರುತನಂದದಿ ರಾಜಿಪ । ವರದಾನಧರ್ಮದಲಿ, ಹರಸಖನ ಮೀರಿಸುತಲಿರುವ ಯತಿಕುಲಲಲಾಮ । ವಿರತಿತಪತ್ಯಾಗದಲಿ, ಪೆರೆಸಿರನ ಪೋಲುತಿಹ ವರದೇಂದ್ರ ನೌಮಿ ಪಾಹಿ ॥ ೬ ॥

ಅಷ್ಟದಿಕ್‌ಪತಿಗಳಂತಿಷ್ಟಲೋಕಗಳಸಂತುಷ್ಟಿಯಿಂ ಪರಿಪಾಲಿಪ ನಿಷ್ಠೆಯಿಂ ಸೇವಿಪರಿಗಿಷ್ಟಾರ್ಥಗಳ ಸಲಿಸಿ, ಶ್ರೇಷ್ಠ ಪದವಿಯನು ಕೊಡುವ ॥ ಕುಷ್ಟಾದಿ ರೋಗಗಳರಿಷ್ಟಾದಿಭೂತಗಳ, ದುಷ್ಟ ಬಾಧೆಗಳ ಕಳೆವ । ಸ್ಪಷ್ಟ ಜ್ಞಾನವನಿತ್ತು, ಶಿಷ್ಟೇಷ್ಟಗಳನೀವ, ಶ್ರೇಷ್ಠಮುನಿ ನೌಮಿ ಪಾಹಿ ॥ ೭ ॥

ಪ್ರತಿವತ್ಸರದ ಕರ್ಕ, ಸಿತಸಪ್ತಮಿಯ ದಿನದಿ, ಪೃಥಿವಿದೇವರಥಗಣದಿ ॥ ಚತುರ ಬೀದಿಗಳಲ್ಲಿ ಅತಿಶಯದ ವಿಭವದಲಿ, ಶ್ರುತಿವೇದಘೋಷಗಳಲಿ । ನತರ ಪೊರೆಯುವೆನೆಂದು, ರಥವೇರಿ ಬರುತಿರುವ, ಯತಿರಾಜ ನೌಮಿ ಪಾಹಿ ॥ ೮ ॥

ಜಾನಕೀಶಭಿನವಪ್ರಾಣೇಶವಿಠ್ಠಲನ, ಪ್ರಾಣಪದಕನೆ ಗುರುವರ । ದೀನದಾಸನು ನಾನು ಜ್ಞಾನಾಮೃತವನುಣಿಸು, ಜ್ಞಾನಿ ಜ್ಞಾನದ ಮುನಿವರ ॥ ದೀನ ವತ್ಸಲ ನಿನ್ನಾ, ಧೀನವರಣುಗನಿಹೆ, ಪೋಣಿಪುದು ಮತಿಯತಿವರ ॥ ಮಾನಿಮಾನದ ಚಂದ್ರ, ದಾನಿವರ ವರದೇಂದ್ರ, ಮೌನಿಪ್ರಭು ನೌಮಿ ಪಾಹಿ ॥ ೯ ॥

■ ■ ■

## ೩೪

[ ರಾಗ : ..... ಅಟ್ಟತಾಳ ]

**ವರದೇಂದ್ರ ಗುರು ನಿಮ್ಮ ಚರಣ ಸರಸೀರುಹ**
ಮರೆಯಾದೆ ಮೊರೆಹೊಕ್ಕೆ ಪರಿಪಾಲಿಸೊ · ಪಲ್ಲ
ಸಿರಿವರ ಗುರು ಅಂಘ್ರಿ ಅರವಿಂದಾರಡಿಯೆ
ಕರುಣಿಸೊ ಸುಖಸಾರ ಅಮುತ್ರಸಾಧನ ಸಿರಿ ಅ.ಪ.

ಪುಂಡರೀಕಾಕ್ಷನ ದಿವ್ಯ
ತಂಡತಂಡದ ರೂಪೋದ್ದಂಡಂಘ್ರಿದಾವರೆ ಬಂಡುಣಿಗನೆ
ಶುಂಡಲೋದ್ಧರನ ಪ್ರಚಂಡ ಶೌರ್ಯದ ಲೀಲಾ
ಕೊಂಡಾಡೊ ಧುರದಲೆ ಪುಂಡತನವು ಕೊಡೊ ೧

ಮಂಗಳಮಹಿಮನ ಶೃಂಗಾರಪದ ಪದ್ಮೋ -
ತ್ತುಂಗದ ಮಹಿಮಿಯ ಪುಂಗ ಭವ್ಯ
ಲಿಂಗಸೂಗುರು ಮಧ್ವರಂಗುಮಠದಿ ನೆಲಸಿ
ಜಂಗುಳಿ ಭಕುತರ ಸಂಗೀತಕ್ಹಿಗ್ಗುವ (ಹಿಗ್ಗುವ) ೨

ಪೂಜಿಪ ಪ್ರಜರಿಗೆ ಸತ್ಯ ಧರ್ಮವು ಕಲ್ಪ -
ಭೂಜನೆನಿಸುತಿಪ್ಪೆ ಭಜಿಪ ಜನರ
ಮೂಜಗದ ಮಹಿತನ ಸೇವೆ ಸನ್ನಿಹಿತಪೂರ್ಣ
ಸೋಜಿಗ ರಚನದ ಯೋಜನುತ್ಪ್ರೇಕ್ಷಿಪ ೩

ವ ಯನ್ನೆ ವಕ್ರ್ತದ ದುಷ್ಟ ದೋಷವು ಪೋಗಿ
ರ ಯನ್ನೆ ರೌದ್ರವು ಅಭಿವ್ಯಕ್ತಿಸಿ -
ದೇಂ ಎನ್ನೆ ದೇವೋತ್ತುಮನಂಘ್ರಿಸ್ತೋತ್ರದಾ -
ದ್ರಾಯನ್ನೆ ದ್ರವ ಪುಟ್ಟುವ ವೀರ್ಯನಾಮದ ೪

ವರಯತಿ ವಸುಧೇಂದ್ರ ಕರಕಂಜಸಂಜಾತ
ಸುರಸಾಂಶಾ ಸುಗುಣಾ ಸುಸುಖಸಾಂದ್ರನೇ
ನಿರುತದಿ ಸುಖತೀರ್ಥ ಗುರುಮತಾಬ್ಧಿಲಿಮತ್ಸ್ಯ
ಗುರುಶ್ರೀಶ ಪ್ರಾಣೇಶವಿಠಲ ಸಂಪ್ರಿಯ ಮುನಿ ೫



## ೩೫

(ನಾರಾಯಣ ತೇ ನಮೋ ನಮೋ ಎಂಬ ಪದದಂತೆ)

ಶ್ರೀ ವರದೇಂದ್ರಗೆ ನಮೋ ನಮೋ
ಕೋವಿದವಂದ್ಯಗೆ ನಮೋ ನಮೋ
ಸೇವಿಪ ಜನರ ಕೃಪಾವಲೋಕನದಿ
ಕಾವ ಕರುಣಿಗೆ ನಮೋ ನಮೋ ಪ

ದೇಶಿಕವರ್ಯಗೆ ನಮೋ ನಮೋ
ದೋಷವಿದೂರಗೆ ನಮೋ ನಮೋ
ಕಾಷಾಯಕಮಂಡಲಧಾರಗೆ ನಮೋ
ಭಾಸುರಚರಿತಗೆ ನಮೋ ನಮೋ ೧

ವಸುಧೀಂದ್ರಕರಸಂಜಾತನಿಗೆ
ವಸುಧಿಜನರ ಸಂಪ್ರೀತನಿಗೆ
ದಶದಿಶದೊಳು ವಿಖ್ಯಾತನಿಗೆ
ಪಶುಪತಿವಿನುತನ ದೂತನಿಗೆ ೨

ಮರುತ ಮತಾಂಬುಧಿ ಸೋಮನಿಗೆ
ಪರಮತತಿಮಿರ ತರಣೀನಿಭಗೆ
ವರದೇಶವಿಠಲನ ಸ್ಮರಿಸುತ ಲಿಂಗಸು -
ಗುರುಸುಕ್ಷೇತ್ರ ನಿವಾಸನಿಗೆ ೩



## ೩೬

[ಮಧ್ವನಾಮದ ಧಾಟಿ, ಝುಂಪೆ ತಾಳ]

ಯತಿಶಿರೋಮಣಿಯಾದ ವರದೇಂದ್ರ ಗುರುರಾಯ
ರತಿಹರುಷದಿಂದ ಈ ಸ್ಥಳಕೆ ಬಂದೂ ॥
ಸಥಿಯಿಂದ ನಿಂದ ವೃತ್ತಾಂತಮಂ ಪೇಳ್ವದಕೆ ।
ಮತಿಕೊಟ್ಟು ಪೇಳಿಸಲಿ ಗುರುರಾಯರೂ ॥ಪ॥

ಶ್ರೀಶ ರಾಮವ್ಯಾಸ, ದೇವರರ್ಚಕರಾದ ।
ಈ ಸ್ವಾಮಿಗಳವರಿಗೇ ಪ್ರೇಮಾಸ್ಪದಾ ॥
ದಾಸಕುಲದೀಪ ಶ್ರೀ ಗುರುಜಗನ್ನಾಥಾಖ್ಯ ।
ದಾಸರಾಯರ ದಯವ ಸೂಸಿ ಪಡದಾ ೧

ಶ್ರೀಪತಿ ಅಯ್ಯನವರ ವಂಶಸ್ಥರಾದ ಈ ।
ಶ್ರೀಪ್ರಾಣೇಶ ದಾಸವರ್ಯರೀಗೆ ॥
ಶ್ರೀಪತಿ ದಯಮಾಡಿ ಒಲಿದ ಕಾರಣದಿಂದ ।
ಭೂಪ ಮುನಿವರರು ಬಂದಾ ಸಮಯದೀ ೨

ಆಪನಿತು ಗುರುವರರ । ಶ್ರೀಪಾದ ಪೂಜೆಯನು ।
ತಾಪರಹಿತಾರಾಗಿ ಅರ್ಚಿಸಲ್ಕೇ ॥
ಗೋಪತಿಯ ಅರ್ಚಕರು ಬಹು ತುಷ್ಟರಾಗಿ ಈ ।
ತಾಪಸದ ಸ್ಥಳವೆಮಗೆ ಈಯೆನಲ್ಕೇ ೩

ಈ ಕಾಯವೇ ತಮ್ಮ ಶ್ರೀಪಾದಕಮಲಕ್ಕೆ
ಸ್ವೀಕಾರ ಮಾಡಿಸುವೆ ಕರುಣಿಸುವದೂ ।
ಬೇಕೆಂದು ಅನುಗ್ರಹವ ಮಾಡಿ ಬರುವಂಥ ಸುಖ ।
ನಾ ಕಾಣೆನೆಲ್ಲಿ ಈ ಪೃಥ್ವಿಯೊಳಗೇ ೪

ಅಂದು ಇವರಿಗೆ ದಾಸವರ್ಯರೀ ಭಾಷೆ ನುಡಿ
ದಂದದೀಯ- ಮಿವರರು ಅತಿ ಹರುಷದೀ

ಸಾಂದೀಪಗೊಲಿದ ಶ್ರೀಹರಿಯಾತ್ರೆ ಆ ಪುಣ್ಯ
ಮಂದಿರದಿ ಮಾಡಿದಾನಂತರದಲೀ ೫

ಕೆಲವು ದಿವಸಾದ ಮ್ಯಾಲೀ ದಿವ್ಯಸ್ಥಳದಲ್ಲಿ
ತುಳಸಿ ವೃಕ್ಷದ ರೂಪ ತಾಳ್ವೆವೆನುತಾ
ಸಲೆ ಸ್ವಪ್ನದಲಿ ಬಂದು ಪೇಳಲಾ ಬಣವಿಯನು
ಬಲು ಬ್ಯಾಗದಿಂ ತೆಗಿಸಿ ನೋಡುತಿರಲೂ ೬

ದಿವ್ಯವಾದಂಥ ದಳಯುಕ್ತದಲಿ ಬೆಳೆದಿದ್ದ
ಸೇವೆಗರ್ಹವಾದ ವೃಕ್ಷ ನೋಡಿ
ಸವ್ಯಸಾಚಿಯ ಸೂತನೀ ಪರಿಯ ತೋರಿದಾ
ನೀವೆಲ್ಲ ನೋಡಿ ಆಶ್ಚರ್ಯವೆನುತಾ ೭

ಬಲ್ಲಿದಾರಾದ ಯತಿ ಮನುಷ್ಯನಳತೆಯ ವೃಕ್ಷ
ದಲ್ಲಿ ಪೂಜೆಯಗೊಳುತ ಇರುತಯಿರಲೂ
ಸಲ್ಲಲಿತವಾದ ವೃಂದಾವನದಿ ಪೂಜೆಗಳು
ಸಲ್ಲಬೇಕೆಂದೆನುತ ಇಚ್ಛೆ ಮಾಡೀ ೮

ಯಾತ್ರೆ ಮಾಡಿದ ಬಳಿಕ ಒಂದೆರಡನೇ ವರುಷ
ಅತ್ರ ವೃಂದಾವನದಿ ಪೂಜೆಯನ್ನೂ
ಸೂತ್ರನಾಮಕ ಪ್ರಾಣಪತಿಯೊಡನೆ ಆಗಲೆಂ -
ಧಾತ್ರಿಸುರರಿಗೆ ಸೂಚನಾದ ಮೇಲೆ ೯
ಗುಲಗುಂಜಿ ಮರಡಿಯೊಳಗಿದ್ದ ವೃಂದಾವನದ
ಶಿಲೆಯನ್ನು ತರುವದಕ್ಕೆ ಸ್ವಪ್ನವಾಗೇ
ಶುಲಭವೋ ಹ್ಯಾಗೊ ನೋಡಲಿಬಹುದು ಎಂದು
ಅಹೋಬಲನ ಸ್ಮರಿಸುತ ಪೋಗಲಾಕ್ಷಣದಲೀ ೧೦

ಖರಿಯವಾಗಿರಲದವನು ತಂದು ಸ್ಥಾಪಿಸುವಾಗ
ಸರುವಜ್ಞರಾಯರಂಶಸ್ಥರಾದಾ
ವರ ಭುವನೇಂದ್ರ ಯತಿಗಳು ಜುಮಲಪುರದಿಂದ
ನರಹರಿಯ ಶಾಲಗ್ರಾಮ ಕಳಿಸಿದದನೂ ೧೧

ಈ ಶ್ರೇಷ್ಠವಾದ ವೃಂದಾವನದ ಮಧ್ಯದಲಿ
ಆಶ್ರೈಸಿಯಿಟ್ಟ ಕಾರಣದಿಂದಲೀ
ಕುಶ್ರೇಷ್ಠವಾದ ಸರ್ಪಗಳ ಭೀತಿಯು ಇಲ್ಲ
ಭೂಶ್ರೇಷ್ಠರಾದ ಜನರುಗಳು ಕೇಳೀ ೧೨

ಕರ್ಮಂದಿವರು ತಾವ್ ಮೆಡುವಂಥ ಹಾವಿಗೆಯ
ಪೇರ್ಮೆಯಿಂದೀಂ ಲಿಂಗಸೂಗುರದಲೀ
ನಿರ್ಮಲದಿ ತಮ್ಮ ವೃಂದಾವನದ ಸನ್ನಿಧಿಲಿ
ಸರ್ವದಾ ಪೂಜೆಗಿರಲೆಂದು ಸ್ವಪ್ನಾ ೧೩

ಅಲ್ಲಿ ಪುನಹೆದಲ್ಲಿದ್ದ ಅರ್ಚಕರಿಗಾಗಲ್ಕೆ
ಸಲ್ಲಲಿತವಾಗಿ ಕಳುಹಿದ ಕಾರಣಾ
ಬಲ್ಲವರು ಬಹು ಭಕುತಿಯಿಂದ ಪೂಜಿಸಿ ಕೊನೆಗೆ
ಸಲ್ಲುವರು ಸದ್ಗತಿಗೆ ಕೇಳಬಹುದು ೧೪

ಈ ಸ್ಥಳವು ಬಹು ಪುಣ್ಯ ಮಾಡಿದದರಂದಲ್ಲಿ
ವಾಸ್ತವ್ಯ ಇವರು ಬಂದಿರುವೈತಿಹ್ಯಾ
ಆಸ್ಥೆಯಿಂದಲಿ ಕೇಳಿ ತೋಷಬಡುವವರ ಮನದ
ಆಸ್ಥೆ ಪೂರೈಸುವರು ಸರ್ವಜ್ಞರೂ ೧೫

ಸತ್ಯಸಂಕಲ್ಪ ಶ್ರೀ ಬಾದರಾಯಣ ತನ್ನ
ಭೃತ್ಯವತ್ಸಲನೆಂಬ ಪ್ರತ್ಯಕ್ಷವಾ
ಮರ್ತ್ಯ ಲೋಕದ ಪದವಿ ಕೀಟದಿಂದಾಳಿಸಿದ
ನಾ ತೆರದೆಲೆ ನಿಂದ ಪೇಳಿಸಿದ ಪದವಾ ೧೬

ಮೋದದಿಂದಲಿ ಈ ಹದಿನೇಳು ನುಡಿಯ ಶ್ರೀ
ಮೋದ ತೀರ್ಥರ ಪಾದಕರ್ಪಿಸಿದೆನೂ
ಮೋದ ಪುಟ್ಟುವಂತೆ ಪಠಣೆ ಮಾಡಲ್ಕೆ ಮಾ -
ಮೋದವಿಠ್ಠಲ ಪ್ರೀತನಾಗುತಿಹನೂ ೧೭

■ ■ ■

## ೩೭

[ರಾಗ ಕಾಪಿ, ಆದಿತಾಳ]

**ವರದೇಂದ್ರತೀರ್ಥರ ಪದಧ್ಯಾನ ಮುಕ್ತಿಮಾರ್ಗಕೆ ಸೋಪಾನ** ಪ
ಗುರು ವಸುಧೇಂದ್ರರ ಕರಕಮಲಜ ತವ
ಚರಣಯುಗಲ ಪರಿಸೇವನಾ ೧

ಪರಮತ ತಿಮಿರ ಭಾಸ್ಕರನೆಂಬುವ ತವ
ಬಿರುದಾವಳಿ ಸುಕೀರ್ತನಾ ೨

ಕ್ಷೋಣಿಸುರರಿಗೆ ದ್ರವ್ಯದಾನದಿಂದಲಿ
ಜಿತ ಭಾನುಜರೆಂಬ ಭೂಷಣ ೩

ಹರುಷತೀರ್ಥರ ಮತಶರಧಿಗೆ
ಪೂರ್ಣಚಂದಿರನೆಂಬುವ ಶುಭಗಾಯನ ೪

ಶರಣರ ಪೊರೆವ ಕಾರ್ಪರನರಶಿಂಹನ
ಕರುಣಪಾತ್ರ ತವ ಸೇವನಾ ೫



## ೩೮

[ ಜೋಗುಳ ಪದ ]

**ಜೋ ಜೋ ವಾದೀಂದ್ರ ಕರಕಮಲೋದ್ಭವ**
ಜೋ ಜೋ ವಸುಧೇಂದ್ರ ಕರಕಮಲ ಸಂಜಾತ
ಜೋ ಜೋ ವರವೀವ ವರಯತಿ ತಿಲಕನೆ
ಜೋ ಜೋ ವರದೇಂದ್ರ ಗುರುರಾಜ ಪ್ರಭುವೆ ಪ

ನಿಜಗುರುಗಳೇವೆ ಋಜು ಪುಂಗವರಾಗಿ
ಅಜನ ಪಟ್ಟಕೆ ಸಾರುವ ಆ ಕಲ್ಪದಲಿ

ಭಜನೆಯ ಗೈದು ಪಂಕಜನಾಭನ ಪಾದ
ಭುಜಗೇಶ ಅಜನೈಯ್ಯಗೆ ತಲ್ಪನಾಗ್ವಿ ೧

ಸುರರೆಲ್ಲ ಕ್ಷೀರ ಸಮುದ್ರ ಮಥಿಸಲಾಗಿ
ಕರಕರೆರ್ವೀವ ಹಲಾಹಲ ಉದುಭವಿಸೆ
ಗುರುವಾಯುದೇವನು ಮಥಿಸಿಕೊಡಲಾಗಿ
ವರರಾಮನಾಮದಿಂ ಜೀರ್ಣಿಸಿಕೊಳುವಿ ೨

ಮೂಲರಾಮನ ಪಾದ ಧ್ಯಾನನಿರತನಾಗಿ
ಮೂಲೇಶನ ಪಾದ ಮೂಲ ಗುರುಗಳ ಸೇವೆ
ಕಾಲಕಾಲಕೆ ಮಾಡಿ ತಾರಕಮಂತ್ರವ
ಬಾಲಭಕುತರಿಗೆಲ್ಲ ಪೇಳ್ವಾದಿಗುರುವೆ ೩

ಈ ಪರಿ ರಾಮ ಮಂತ್ರವ ಸಾಧಿಸಿಕೊಳಲು
ಅಪಾರವಾದ ಮಧ್ವ ಮತದಲಿ ಪುಟ್ಟಿ
ಭೂಪಾರದೊಳಗೆ ಯತ್ಯಾಶ್ರಮ ಕೈಕೊಂಡು
ಶ್ರೀಪ ಸೀತಾರಾಮನ ಪೂಜೆ ಗೈಯ್ವಿ ೪

ಯೋಗಿಗಳರಸಾದ ರಾಘುವೇಂದ್ರರ ಅನು -
ರಾಗದಿಂದಲಿ ಐದಿ ಯೋಗ ಸಂಪಾದಿಸಿ
ಬ್ಯಾಗವಾಟದ ರಂಗ ಭಾಗವತರಿಗೊಲಿದು
ಆಗಮಾರ್ಥವ ಸುಯೋಗ ಬೋಧಿಸಿದೆ ೫

ಕ್ಷೋಣಿಸುರರ ಉದ್ಧರಿಪಗೋಸುಗವಾಗಿ
ಪ್ರಾಣಪದಕರೆನಿಪ ಜಗನ್ನಾಥದಾಸರಾ -
ಯಾಣುಗರಲ್ಲಿ ಗೋವತ್ಸ ನ್ಯಾಯದಂತೆ
ಪ್ರಾಣೇಶದಾಸರಿಗೊಲಿದು ನೀ ಬಂದೆ ೬

ರಾಮನ ಪೂಜೆಯ ನೀ ಮುದದಿ ಮಾಡಿ
ಪ್ರೇಮಾಸ್ಪದವಾದ ಈ ಬಣಾವಿಯ ದೊಡ್ಡಿಯ
ನೇಮದಿ ಕೈಕೊಂಡ ಸೀಮೆಗಾಣದ ಮಹಿಮ
ರಾಮಶಾಸ್ತ್ರಿಯ ಗೆಲಿಯ ಪೋದೆ ನೀ ಪುಣೆಗೆ ೭

ವಾದದಲಿ ರಾಮಶಾಸ್ತ್ರಿಗಳ ಗೆಲಿದು ನೀ
ಬೋಧಪೂರ್ಣರ ಮತ ಸುಸ್ಥಾಪಿಸಿ ಅಲ್ಲಿ
ಭೇದವೆ ಸತ್ಯ ಹರಿಪರನೆಂದು ಒರೆದು
ಸಾಧುಗಳನು ಮುದಬಡಿಸಿದ ಧೀರಾ ೮

ಸಾರಿದ ಜನರಘದೂರವ ಗೈಸಿ
ಮಾರಾರಿಪದಕೆ ಯೋಗ್ಯತ್ವ ಸಂಪಾದಿಸಿ
ಮಾರಜನಕ ಶ್ರೀರಾಮನ ಹೃತ್ಪಂ -
ಕುರಹದಿಟ್ಟಲ್ಲೇ ಪರಲೋಕ ಸಾರ್ದೆ ೯

ತುಲಸಿ ವೃಕ್ಷದ ರೂಪದಿ ಬಂದು ನಿಲುವಿ
ಶಿಲೆ ಸುವೃಂದಾವನ ಮಧ್ಯದಿ ಮೆರೆವೆ
ಸಲೆ ಪಾದುಕ ಪುಣೆ ಅರ್ಚಕರಿಂ ತರಿಸಿ
ಚಲುವರಾಯನ ಪಾದ ಮದವ್ಯೆದ ಇಭವೆ ೧೦

ಸ್ವಾಪ್ನದಲಿ ನಿಜರೂಪವ ತೋರಿಸಿ
ಅಪಾರ ಮಹಿಮೆ ಪಾಡಿಸಿದ ಮಹಾ ಪ್ರಭೊ!
ಶ್ರೀಪತಿ ಧ್ಯಾನದಿ ದಿವ್ಯ ರಥಮೇರ್ದು
ಆ ಪರಮ ಸುಂದರವಿಠಲರೂಪ ತೋರ್ದೆ ೧೧

■ ■ ■

## ३೯

[ರಾಗ: ಶಾಂಭವಿ - ಝಂಪೆ ತಾಳ]

**ವರ್ಣಿಸಲು ಸಾಧ್ಯವೇ ಧರೆಯೊಳಿನ್ನು**
ಎಂದೆಂದು ಗುರು ನಿನ್ನಾದರ ಮಹಿಮೆಗಳನು
ದಶಪ್ರಮತಿ ಸುಮತಾಖ್ಯ ಬಿಸುನಿಧಿಗೆ ಉಡುನಾಥ
ವಸುಧಿ ಸುಮನಸ ವ್ರಾತ ನಮಿತ ಖ್ಯಾತಾ
ವಸುಧೀಂದ್ರ ಕರಜಾತ ಸುಶರಣರ ಸುಖದಾತ
ವಸುದಿಶದಿ ಪಸರಿಸಿದ ಅಸಮ ತವ ಚರಿತೆಯನು ೧

ಸಾರ ಕನ್ನಡದಲ್ಲಿ ನೀ ರಚಿಸುತಲಿ ತಂತ್ರ -
ಸಾರ ಮಂತ್ರವ ಪರಮ ಕಾರುಣ್ಯದಿ
ಶ್ರೀರಂಗನೊಲಿಸಿದ ಧಾರುಣಿಪ ದಾಸರಿಗೆ
ಸಾರಿ ಪೇಳಿದ ಪರಮೋದಾರ ಜಿತಮಾರ ೨

ಪುಣೆ ಎಂಬೊ ಪಟ್ಟಣದಿ ತನು ಬಿಟ್ಟು ಮುದದಿಂದ
ಗುಣನಿಧಿ ಪ್ರಾಣೇಶ ದಾಸಾರ್ಯರಾ
ಮನೆಯ ಹಿತ್ತಲದೊಳಗೆ ಬಣವಿ ಬುಡದಲಿ ಬಂದು
ಘನ ತುಲಸಿ ರೂಪದಲಿ ಜನಕೆ ತೋರಿದ ಚಿತ್ರ ೩

ವಾದದಲಿ ರಾಮಾಖ್ಯ ವಾದಿಯಪಜಯ ಪೊಂದಿ -
ಸ್ಯಾದರದಿ ಗಜ ಭೂಷಣಾದಿಗಳನೂ
ಪಾದಕರ್ಪಿಸಲಾಗ ಭೂದೇವ ಜನಕಿತ್ತು
ಮೋದ ಬಡಿಸಿದ ನಿನ್ನ ಔದಾರ್ಯ ಗುಣವಾ ೪

ಶ್ಯಾಮಸುಂದರ ಮೂಲ ರಾಮಚಂದ್ರನ ಚರಣ
ತಾಮರಸ ಷಟ್ಪರಣ ಪರಮ ಸುಗುಣಾ
ಧೀಮಂತ ಶ್ರೀಮಂತ ಧಾಮ ನಿಲಯರ ಪೂರ್ಣ
ಪ್ರೇಮ ಸತ್ಪಾತ್ರ ಮಮ ಸ್ವಾಮಿ ಸುಚರಿತ್ರ ೫



# ೧೫. ಶ್ರೀಧೀರೇಂದ್ರತೀರ್ಥರು

( ೧೭೮೫ )

ಮಂತ್ರಾಲಯ ಮಠದ ಅಧಿಕೃತ ಪೀಠಸ್ಥರಾಗಿ ಒಂದೇ ವರ್ಷ ಕಳೆದಿದ್ದರೂ ಆ ಪೂರ್ವದಲ್ಲಿ ಎಂದರೆ ೨೦ ವರ್ಷಗಳ ಹಿಂದೆಯೇ ಆಶ್ರಮ ಸ್ವೀಕಾರ ಮಾಡಿ, ಜಯರಾಮಾಚಾರ್ಯರು ಧೀರೇಂದ್ರ ಯತಿಗಳಾಗಿದ್ದರು. ಶ್ರೀ ವಾದೀಂದ್ರರ ಮಗನಾದ್ದರಿಂದ ಶ್ರೀಪಾದಪುತ್ರರೆನಿಸಿದ್ದರು; ನಿಜ. ಜೊತೆಗೆ ಇವರ ಅಸದೃಶ ಶಾಸ್ತ್ರ ಪ್ರವೀಣತೆಯನ್ನು ಅರಿತಿದ್ದ ಶ್ರೀ ವಾದೀಂದ್ರರು ( ತಮ್ಮ ತಮ್ಮನ ಅನಂತರ ) ಒಂದೊಮ್ಮೆ ಸಂಸ್ಥಾನಪೀಠವನ್ನೂ ಅಲಂಕರಿಸಲು ಇವರು ಯೋಗ್ಯರೆಂದು ಮಗನಿಗೂ ಇತರರಿಗೂ ಹೇಳಿಯೂ ಇದ್ದರು. ಆದರೆ ಶ್ರೀ ಜಯರಾಮಾಚಾರ್ಯರಿಗೆ ಅದರಲ್ಲಿ ಆಸಕ್ತಿಯೇ ಇದ್ದಿಲ್ಲ! ಶಾಸ್ತ್ರಾಧ್ಯಯನ, ಪಾಠ ಪ್ರವಚನಗಳಲ್ಲೇ ಸದಾ ನಿರತರಾಗಿದ್ದರು.

ಶ್ರೀ ವಾದೀಂದ್ರರ ಅನಂತರ ಬಂದ ಅವರ ಬಂಧು ವಸುಧೇಂದ್ರರು ತಮ್ಮ ತರುವಾಯ ಸಂಸ್ಥಾನದ ಅಧಿಪತ್ಯವನ್ನು ಜಯರಾಮಾಚಾರ್ಯರಿಗೆ ಕೊಡಬೇಕೆಂದರೆ ತಮ್ಮ ಅವಸಾನ ಕಾಲಕ್ಕೆ ಅವರು ಇರಲೇ ಇಲ್ಲ. ಹೀಗಾಗಿ ತಮ್ಮ ಸೋದರ ಶ್ರೀ ಬಲರಾಮಾಚಾರ್ಯರಿಗೆ ಆಶ್ರಯವಿತ್ತರು. ಇವರೇ ಸುಪ್ರಸಿದ್ಧ ಶ್ರೀ ವರದೇಂದ್ರರು. ಇವರು ಕೂಡ ತಮ್ಮ ಅವಸಾನ ಕಾಲದಲ್ಲಿ ಜಯರಾಮಾಚಾರ್ಯರಿಗೆ ಕಾಯಿ ಕೊಡಬೇಕೆಂದರು. ಆಗೂ ಅವರು ಹತ್ತಿರ ಇರಲಿಲ್ಲ! ಪರಿಣಾಮವಾಗಿ, ಶ್ರೀ ವರದೇಂದ್ರರು ವಿಧಿಯಿಲ್ಲದೆ ತಮ್ಮ ಕಿರಿಯ ಬಂಧುವಿಗೆ ಆಶ್ರಮವಿತ್ತರು ( ಶ್ರೀ ಭುವನೇಂದ್ರರು ) ಹಾಗೂ "ನೀನು ಕಕ್ಕಂದಿರಾದ ಜಯರಾಮಾಚಾರ್ಯರಲ್ಲಿಯೇ ವಿದ್ಯಾಭ್ಯಾಸ ಮಾಡಬೇಕು" ಎಂದು ಹೇಳಿದ್ದರು. ಇಷ್ಟರ ಮಟ್ಟಿಗೆ ಅವರ ಪಾಂಡಿತ್ಯವು ನೆಲೆಗೊಂಡ ಮಾತಾಗಿದ್ದಿತು; ಅಷ್ಟೇ ಅವರ ಪೀಠಾಧಿಪತ್ಯದ ಅನಾಸಕ್ತಿ ಕೂಡ.

ಒಮ್ಮೆ ಅವರು ಕುಂಭಕೋಣಕ್ಕೆ ಹೋದಾಗ ವೃಂದಾವನಸ್ಥ ಶ್ರೀ ವಿಜಯೀಂದ್ರರು ಅವರಿಗೆ "ಸಂಸ್ಥಾನವನ್ನು ಒಪ್ಪಿಸಬೇಕೆಂದಾಗ, ಆಗದು ಎಂದು ಹೇಳಬಾರದು" ಎಂದು ಎಚ್ಚರಿಸಿದಂತಾಯಿತು. ಸರಿ; ಅಲ್ಲಿಯೇ ಕುಳಿತು ಸ್ವಯಂ ಸನ್ಯಾಸಾಶ್ರಮ ಸ್ವೀಕರಿಸಿದರು. ಆದರೆ ಪೀಠಾಧಿಕಾರಿಯಾಗಿ ಶ್ರೀ ಭುವನೇಂದ್ರರು ಇದ್ದರಲ್ಲ. ಹೀಗಾಗಿ ಬಿಡಿ ಸನ್ಯಾಸಿಯಾಗಿ ಉಳಿದರು. ಈ ಸುದ್ದಿ ತಿಳಿದ ಶ್ರೀ ಭುವನೇಂದ್ರರು ಅಲ್ಲಿಗೆ ಧಾವಿಸಿ ಬಂದು, "ನೀವೇ

ಶ್ರೀರಾಮದೇವರ ಪೂಜೆ ಮಾಡಬೇಕು" ಎಂದು ಆಗ್ರಹಿಸಿ, ಸಂಗಡ ಕರೆದುಕೊಂಡು ಬಂದರು. "ಆಯ್ತು" ಎಂದರು ಧೀರೇಂದ್ರರು; ಪೀಠಾಧಿಪತಿಗಳಾದರು. ಆದರೆ ಕೆಲಕಾಲ ಮಾತ್ರ. ಅಷ್ಟಟಿ ವೀತರಾಗಿ ಮತ್ತೆ ಅವರು ಆ ಕಾರ್ಯವನ್ನು ಭುವನೇಂದ್ರರಿಗೇ ಒಪ್ಪಿಸಿಬಿಟ್ಟರು! ಅತ್ಯಂತ ಅಪೂರ್ವವಾದ ಸನ್ನಿವೇಶವಿದು. ಆದರೆ ಶ್ರೀ ಧೀರೇಂದ್ರರು ವೈಭವೋಪೇತವಾಗಿಯೇ ಪೂಜಾದಿ ಕಾರ್ಯಗಳನ್ನು ಕಿರಿಮಠವೆಂಬಂತೆ ನಡೆಸಿಕೊಂಡು ಬರುತ್ತಿದ್ದರು, ವಿಶೇಷತಃ ರಿತ್ತಿಯ ಗ್ರಾಮದಲ್ಲಿ. ಅಲ್ಲಿ ಇದ್ದಾಗ, ಹತ್ತಿರದ ಸವಣೂರಿನ ಶ್ರೀ ಸತ್ಯಬೋಧರು, ಕರ್ಜಗಿಯ ಶ್ರೀದವಿಠಲದಾಸರು ಹಾಗೂ ಶ್ರೀ ಜಗನ್ನಾಥದಾಸರು ಆಗಾಗ ಭೆಟ್ಟಿಯಾಗುತ್ತಿದ್ದರು; ಅವರುಗಳು ಧರ್ಮಜಿಜ್ಞಾಸೆಯ ಸುಖಸಂಕಥಾವಿನೋದದಲ್ಲಿ, ತೊಡಗಿರುತ್ತಿದ್ದರೆಂಬ ಮಾತು ಇಂದಿಗೂ ಜನಮನವನ್ನು ಮುದಗೊಳಿಸುತ್ತಲಿದೆ. ಅವರ ಸಮಾಗಮದ ಜಾಗವು, ಕೋಣನತಂಬಿಗೆಯ ಬದಿಯಲ್ಲಿಯ ವರದಾ ನದೀ ತೀರದ ಒಂದು ಕಿರುದಿಬ್ಬವೆಂದು ಈಗಲೂ ಜನ ನೆನೆಯುವುದುಂಟು. ಶ್ರೀ ಸತ್ಯಬೋಧರು ಶ್ರೀ ಧೀರೇಂದ್ರ, ಶ್ರೀ ವರದೇಂದ್ರ ಈ ಇಬ್ಬರನ್ನೂ ಸೋದರ-ಮಿತ್ರತ್ವದಿಂದ ಕಾಣುತ್ತಿದ್ದರು. ಒಮ್ಮೆ ಶ್ರೀ ಧೀರೇಂದ್ರರು ರಾತ್ರಿಯ ಹೊತ್ತಿನಲ್ಲಿ ಪೂರ್ವಸೂಚನೆಯಿಲ್ಲದೆ ಇವರಲ್ಲಿಗೆ ಬಂದುದಾಗಿ ಶ್ರೀ ಸತ್ಯಬೋಧರ ಸಮಕಾಲೀನ ಚರಿತ್ರೆಯೊಂದರಲ್ಲಿ ಹೇಳಿದ್ದಿದೆ. ಅಷ್ಟರ ಮಟ್ಟಿಗೆ ಆತ್ಮೀಯತೆ ಇದ್ದಿತು.

ಶ್ರೀ ಧೀರೇಂದ್ರ ಯತಿಗಳು ಶ್ರೇಷ್ಠ ವ್ಯಾಖ್ಯಾನಕಾರರೂ ಆಗಿದ್ದರು. ಹಾಗೆ ರಚಿಸಿದ್ದರಲ್ಲಿ ನಾರಾಯಣೋಪಪತ್ತಿನ ವ್ಯಾಖ್ಯಾನವನ್ನೂ ಹೆಸರಿಸಬೇಕು. ಅವರ ಇನ್ನೊಂದು ಮಹತ್ವದ ಕೃತಿ ವಾದೀಂದ್ರ - ವಿರಚಿತ ಸುಪ್ರಸಿದ್ಧ ಗುರುಗುಣಸ್ತವನಕ್ಕೆ ಬರೆದ ವ್ಯಾಖ್ಯಾನವಾಗಿದೆ.

ಮೇಲೆ ಕಾಣಿಸಿದಂತೆ ರಿತ್ತಿಯು ಅವರು ಮನಮೆಚ್ಚಿದ ಪುಣ್ಯಸ್ಥಳವಾಯಿತು. ಅಲ್ಲಿಯೇ ಹರಿಪದವನ್ನೈದಿದರು. ( ಫಾಲ್ಗುಣ ಶುದ್ಧ ತ್ರಯೋದಶಿ ). ಅಚ್ಚರಿಯ ಸಂಗತಿಯೆಂದರೆ ಆ ಗಳಿಗೆಗೆ ಅವರಿಗಾಗಿ ವೃಂದಾವನ ಸಿದ್ಧಪಡಿಸುವುದಾಗಿಯೇ ಇರಲಿಲ್ಲ. ಅವರು ಅಸುನೀಗಿ ಎಷ್ಟೋ ದಿನಗಳು ಸಂದ ಮೇಲೆ ಓರ್ವ ಅಭಿಮಾನಿ ಶಿಷ್ಯರಿಗೆ ಸ್ವಪ್ನವಾಯಿತು. ಆ ಶಿಷ್ಯ ತಾಸಿರುತ್ತಿದ್ದ ಮನೆಯನ್ನೆ ಮಠವನ್ನಾಗಿ ಪರಿವರ್ತಿಸಿ ವೃಂದಾವನ ಸ್ಥಾಪನೆಗೆ ನೆರವಾದರು. ಶ್ರೀ ಧೀರೇಂದ್ರರ ಮಹಿಮೆ ಅಪಾರ. ಅದಕ್ಕಾಗಿಯೇ ರಿತ್ತಿ ಗ್ರಾಮಕ್ಕೆ ಪ್ರತಿವರ್ಷ ಆರಾಧನೆಗೆಂದು ಹೋಗುತ್ತಿರುವವರ ಸಂಖ್ಯೆ ಹೆಚ್ಚುತ್ತಲಿದೆ.

■ ■ ■

## ೪೦

[ರಾಗ: ರೇಗುಪ್ತಿ, ತಾಳ - ಆದಿ]

**ವರದಾ ತೀರದಿ ಶೋಭಿಪ ಯತಿವರನ್ಯಾರೇ ನೋಡಮ್ಮಯ್ಯಾ** ಪ
ತ್ವರದಿ ಭಕುತರ ದುರಿತವ ತರಿದತಿ
ತ್ವರದಿ ಪಾಲಿಪ ಧೀರೇಂದ್ರ ಕಾಣಮ್ಮ ಅ.ಪ.

ಸುಂದರ ತಮ ವೃಂದಾವನ ಶುಭತರ
ಮಂದಿರಗತನ್ಯಾರೇ ನೋಡಮ್ಮಯ್ಯಾ
ನಂದದಿ ಮಹಜನ ಸಂದಣಿ ಮಧ್ಯದಿ
ಚಂದಿರ ತೆರದಿಹನ್ಯಾರೇ ನೋಡಮ್ಮಯ್ಯಾ
ಇಂದಿರೆಪತಿ ಗುಣ ವೃಂದವ ಭಜಿಸುತ
ನಂದದಿ ಶೋಭಿಪನ್ಯಾರೇ ಪೇಳಮ್ಮಯ್ಯಾ
ಅಂಧ ಬಧಿರರ ವೃಂದಗಳಿಗಿಷ್ಟವ
ನಿಂದು ನೀಡುವ ವಾದೀಂದ್ರರ ತನುಜ ೧

ಮೂಢ ಮತಿಯನು ಓಡಿಸಿ ನಿಜರಿಗೆ
ಗಾಢ ಭಕುತಿಯನು ನೋಡಮ್ಮಯ್ಯಾ
ನೀಡುವ, ಭಜಕರು ಮಾಡುವ ಸೇವೆಗೆ
ನೀಡುವ ವರಗಳನ್ಯಾರೇ ನೋಡಮ್ಮಯ್ಯಾ
ಪಾಡುವ ದಾಸರು ಬೇಡುವ ಇಷ್ಟವ
ನೀಡುವದಿನ್ಯಾರೇ ಪೇಳಮ್ಮಯ್ಯಾ
ರೂಢಿಯೊಳಗೆ ಇಷ್ಟ ನೀಡುವ ವಿಷಯದಿ
ಜೋಡುಗಾಣೆನಾ ನೋಡಮ್ಮಯ್ಯಾ ೨

ಭೂತ ಪೀಡೆ ಮಹ ಪ್ರೇತ ಪಿಶಾಚಿಯ
ವ್ರಾತಗಳು ಬವಿ ನೋಡಮ್ಮಯ್ಯಾ
ಭೀತಿ ಬಡುತ ಮಹ ಆತುರದಲಿ ಈ
ಭೂತಳ ಬಿಡುತಿಹವೋ ನೋಡಮ್ಮಯ್ಯಾ

ಯಾತುಧಾನಗಣ ಈತನ ನಾಮದ
ಭೀತಿಗೆ ಪೋಗುತಿಹುದು ನೋಡಮ್ಮಯ್ಯಾ
ತಾತನ ತೆರದಲಿ ಈತನು ನಿಜಪದ
ದೂತರ ಪೊರೆವನು ನೋಡಮ್ಮಯ್ಯಾ
ದಾತ ಗುರುಜಗನ್ನಾಥವಿಠ್ಠಲಗೆ
ಪ್ರೀತ ಜನರೊಳತಿ ಪ್ರೀತನೀತಮ್ಮಾ ೩

■ ■ ■

## ೪೧

**[ರಾಗ: ಮೋಹನ, ತಾಳ - ಆದಿ]**

**ಎಂದು ಕರುಣದಿಂದ ನೋಡುವಿ, ಧೀರೇಂದ್ರ ಗುರುವೇ ।**
ಎಂದು ನಮಗಾನಂದ ನೀಡುವಿ ಪ
ಎಂದು ಕರುಣದಿಂದ ನೋಡುವಿ
ನೊಂದು ಪಾಪದಿಂದ ಬಳಲಿ
ಬಂದು ನಿನ್ನ ಕಂದ ನೆಂ-
ತೆಂದು ಪಾದ ಪೊಂದಿದವನ ಅ.ಪ.

ದೂರದಿಂದ ದಣಿದು ಬಂದೆನೊ, ಯತಿರಾಯ
ಚಾರು ವೃಂದಾವನವ ಕಂಡೆನೊ
ಭಾರಿ ಭಾರಿ ನೆರೆದ ಪರಿವಾರವನ್ನು ನೋಡಿ ಮನಸು
ಸೇರಿಸಿದೆನೊ ತೋಷದಿಂದ ನಿಮ್ಮ ಧೀರ ಚರಣದಲ್ಲಿ ೧

ಅಷ್ಟಗಂಧ ತುಲಸಿ ಮಾಲೆಯ ಶಾಂತಿನೆಲೆಯ
ಇಟ್ಟ ಅಕ್ಷತೆ ರಕ್ಷಣಾ ಸಿರಿಯ
ಶಿಷ್ಟ ಶಾಟಿ ದಂಡಧಾರಿ ಧೀರಸಿಂಹನಾದ ಗುರುವೆ
ಅಟ್ಟು ಎನ್ನ ಅಘದ ರಾಶಿ ನಿಷ್ಠೆಯಿಂದ ಭಜಿಪೆ ನಿಮ್ಮ ೨

ಶ್ರೇಷ್ಠ ನಿಮ್ಮ ಪಟ್ಟಣಾದೊಳು, ಯತಿರಾಯ ಕೇಳು -
ರುಷ್ಟ ವರದೆ ಮೆಟ್ಟಿ ಹರಿದಿಹಳು
ಮುಟ್ಟಿ ಸ್ನಾನ ಮಾಡೆ ಒಟ್ಟು ಹೋಗುವುದು ಗ್ರಹ ಶ್ರೀಕೃಷ್ಣ
ವಿಠ್ಠಲನ್ನ ಭಜಿಪ ಯತಿವರೇಣ್ಯ ಎನ್ನ ೩

■ ■ ■

## ೪೨

**[ರಾಗ: ಕಾಂಬೋಧಿ, ತಾಳ - ಝಂಪ]**

**ಮರೆಯ ಹೊಕ್ಕೆನೊ ನಿನ್ನ । ಮರೆಯಬೇಡವೋ ಎನ್ನ**
ಕರುಣ ನಿಧಿ ಶ್ರೀಗುರು । ಧೀರೇಂದ್ರರಾಯಾ ಪ

ಹೇಶಿ ವಿಷಯದಿ ಸಿಲುಕಿ ಘಾಸಿಯಾದೆನೊ ಗುರುವೆ
ಕ್ಲೇಶ ಪಡುತಿಹೆ ನಾನು ಕ್ಷಣ ಕ್ಷಣದಲೀ
ದೋಷ ರಾಶಿಯ ಕಳೆದು ಪೋಷಿಸೆನ್ನನು ದಯದಿ
ಭೂಸುರ ಪ್ರಿಯ ಶ್ರೀ ಧೀರೇಂದ್ರರಾಯಾ ೧

ಪಾಪಿಗಳೊಳು ನಾನು ಅತಿ ಪಾಪಿಯಾಗಿಹೆನು
ಶ್ರೀಪಾದಕೀಗ ಶರಣು ಬಂದಿಹೆನೋ
ಅಪಾರ ಮಹಿಮರೆ ನಿಮ್ಮ ಕೃಪಾವಲೋಕನದಿಂದ
ಈ ಪಾಮರನ ಉದ್ಧರಿಸೋ ಧೀರೇಂದ್ರರಾಯಾ ೨

ನಿಮ್ಮ ಸೇವೆಯನೆಂದೂ ಮಾಡಿದವ ನಾನಲ್ಲ
ಹೆಮ್ಮೆಯಲಿ ಮಣೆ ಗೆದ್ದ ಅಜ್ಞ ನಾನು
ಎಮ್ಮ ಅಪರಾಧವನು ಮನ್ನಿಸಿ ನೀ ಬೇಗ
ರಮ್ಮೆಯರಸನೆ ತೋರು ಧೀರೇಂದ್ರರಾಯಾ ೩

ಹೇಸಿ ಸಂಸಾರದ ಆಸೆಯನು ನೀ ಬಿಡಿಸಿ
ಲೇಶ ಭಕುತಿಯ ಕೊಡೋ ಶ್ರೀಚರಣದಲ್ಲಿ

ದಾಸ ದಾಸರ ದಾಸ ದಾಸನ್ನ ಮಾಡಿ ಸಲಹೊ
ಹೊಸರಿತ್ತಿ ಪುರವಾಸ ಧೀರೇಂದ್ರರಾಯಾ ೪

ವರದ ತೀರದಿ ನಿಂತ ವರದ ಹಸ್ತನು ನೀನು
ವರದೇಂದ್ರ ಗುರುವರ್ಯ ಕರಕಮಲಜಾತಾ
ವಾರಿಧಿ ಶಯನ ಶ್ರೀವೆಂಕಟೇಶನ ನಿತ್ಯ
ವಾರ ವಾರಕೆ ಭಜಿಪ ಧೀರೇಂದ್ರರಾಯಾ ೫

■ ■ ■

## ೪೩

**[ರಾಗ : ಪೀಲು, ತಾಳ - ಆದಿ]**

**ಲಾಲಿ ಲಾಲಿ ಗುರು ಧೀರೇಂದ್ರವರ್ಯಾ**
ಲಾಲಿ ತ್ರಿಭುವನದೊಳಗೆ ನಿನಗಾರು ಸರಿಯೆ ಪ

ವಿಸ್ತರದ ಪಲ್ಲಕ್ಕಿ ಏರಿ ಬರುವಾಗ
ಸುತ್ತ ಭೂಸುರರೆಲ್ಲ ನೆರೆದಿರಲು ಬೇಗ
ಮತ್ತೆ ವೇದೋಕ್ತದಲಿ ಪಾಡುತ್ತಲೀಗ
ರತ್ನ ಮಂಟಪ ತಂದು ಇಳಿಸಿದರು ಬೇಗ ೧

ನವರತ್ನಮಯವಾದ ತೊಟ್ಟಿಲದಲ್ಲಿ
ಪವನ ಸೇವಿಸಿ ಗುರುಗಳಿರಿಸಿದರು ಅಲ್ಲಿ
ದಿವಿಜರೆಲ್ಲರು ಕೂಡಿ ವೇದ ಶಾಸ್ತ್ರದಲಿ
ತವಕದಿ ಆಚಾರ್ರು ತೂಗೆ ವಿನಯದಲಿ ೨

ಸಾಲು ಸಾಲು ದಿವಿಜ ಮಸ್ತಕದ ಮಣಿಯೆ
ಲೀಲೆಯನು ನೋಡಿ ಸುರರೆಲ್ಲ ಮನದಣಿಯೆ
ಮೂಲೋಕದ ಅಖಿಳ ಜನರು ನಿನಗೆಣಿಯೆ
ಪಾಲಿಸೆನ್ನನು ನೀನು ಯತಿಶಿರೋಮಣಿಯೆ ೩

ಇಷ್ಟು ವೈಭವನೆಲ್ಲ ದೃಷ್ಟಿಯಿಂದಲಿ ನೋಡಿ
ತುಷ್ಟರಾಗಿ ಮನದ ಕಷ್ಟಗಳ ದೂಡಿ
ಶ್ರೇಷ್ಠ ಯತಿ ನೀನಹುದೆಂದು ಪಾಡಿ
ಮುಟ್ಟಿ ಭಜಿಸುವಗೆ ಇಷ್ಟಾರ್ಥ ನೀಡಿ ೪

ಜಯ ಜಯತು ವರದೇಂದ್ರ ಕರಕಮಲ ಜಾತ
ಜಯತು ವರದಾ ತೀರದಲ್ಲಿರುವ ಖ್ಯಾತ
ಜಯತು ನಂಬಿದ ಜನಕೆ ಅಭಯ ಪ್ರದಾತ
ಜಯತು ಶ್ರೀಮುದ್ದುಕೃಷ್ಣವಿಠ್ಠಲಗೆ ಪ್ರೀತ ೫

■ ■ ■

## ೪೪

[ರಾಗ: ಸಾರಂಗ, ತಾಳ - ಆದಿ]

**ಧೀರೇಂದ್ರ ಗುರುಗಳ ಚಾರು ಚರಣ ಸ್ಮರಿಸಿರೋ** ಪ
ಚಾರುತೀರ್ಥರ ಕರಾರ್ಚಿತನ ತೋರ್ವರೋ
ವರದೇಂದ್ರತೀರ್ಥರ ಕರಜ ಕುವರರೆನಿಸಿದ
ಗುರು ವಿಜಯೀಂದ್ರರ ಪರಮ ಕರೆಯ ಲಾಲಿಸಿ ೧

ವರದಾ ತೀರದಿ ವರವೀವ ಯತಿಗಳ
ಗುರು ಪಾದ ಉದಕವ ಸ್ವೀಕರಿಸೆ ಸತ್ಫಲ ೨

ವರದೇಂದ್ರರಿಗಿಂತ ಪರಮ ಹರಿಕಥಾಮೃತ
ಗುರುವೆ ಶ್ರವಣಿಸಿ ಚರಣದಾಸಗರುಹಿದ ೩

ಮನ್ಯು ಸೂಕ್ತದಿ ಸ್ತಂಭಜನ ತೋರಿಸಿ
ಮಾನ್ಯರೆನಿಸಿದ ಜ್ಞಾನಿ ಪ್ರಾಣಾವೇಶರ ೪

ಪುರ ಪೂನಾನಗರಿಯ ಪರವಾದಿ ಶಾಸ್ತ್ರಿಯ
ವರ ಮಹಾಲಯ ಗುರುವರಾಶ್ರಮೆನಿಸಿದ ೫

ಗುರುಗುಣಸ್ತವನದ ಸರಳವ್ಯಾಖ್ಯಾನಿಸೆ
ಹರುಷದ್ಹರಸಿದ ಗುರು ವಾದೀಂದ್ರ ಪ್ರಿಯರ ೬

ಪುರುಷ ಸೂಕ್ತಕೆ ಜ್ಞಾನ, ಸ್ಪರುಶ ಮಾಡಲು
ಸ್ಫುರಿಸೆ ಸುಧೆಯನು ಗುರು ಸವಿದು ಹಾಡಿದ ೭

ಶ್ರೀಸೂಕ್ತದರ್ಶಿಸಿ ಹೊಸ ನೇತ್ರ ತೆರೆಸುತ
ದಾಸ ವೃಂದಕೆ ಸಾಸಿರಾಕ್ಷನ ತೋರಿದ ೮

ಆದಿ ನಾರಾಯಣನ ವೇದಾಂತ ಸೃಷ್ಟಿಸಿ
ಸುಧೆಯನುಣಿಸಿದ ಗುರು ಮಧ್ವ ಪ್ರೀಯರ ೯

ಭೂತಾದಿ ವ್ಯಾಧಿಯ ವಾತಜನಕನೊಲಿಮೆಲಿ
ಖಾತ್ರಿ ಕಳೆಯುವ ಯತಿಶ್ರೇಷ್ಠ ಆಪ್ತರ ೧೦

ಯತಿರತ್ನರಿರುತಿಹ ರತುನ ರಿತ್ತಿ ಕ್ಷೇತ್ರವ
ಸತತ ಪೊರೆವಳು ವರದೆ ಸ್ತುತಿಪೆ ಪೂಜ್ಯರ ೧೧

ಚೈತ್ರ ಪೂರ್ವಮಾಸ ತಾರಪತಿಯ ಪಕ್ಷದ
ಚತುರ್ದಶಿಯ ಪೂರ್ವದಿ ಕ್ಷಿತಿಪತಿಯ ಸೇರಿದ ೧೨

ಧೀರವಿಠ್ಠಲದಾಸ ಧೀರೇಂದ್ರತೀರ್ಥರ
ಸ್ಮರಿಸಲನುದಿನ ಪುರುಷಾರ್ಥ ಚಿದ್ಘನ ೧೩

(ಸಂಗ್ರಹ)



# ೧೬. ಶ್ರೀ ಭುವನೇಂದ್ರತೀರ್ಥರು

(೧೭೮೫ - ೧೭೯೯)

ಪೂರ್ವಾಶ್ರಮದಲ್ಲಿ ಶ್ರೀವಸುಧೇಂದ್ರರ ಮತ್ತು ಶ್ರೀ ವರದೇಂದ್ರರ ಬಂಧುವಾಗಿದ್ದ ಶ್ರೀ ಭುವನೇಂದ್ರರು ಸನ್ಯಾಸಾಶ್ರಮವನ್ನು ಈ ಹಿಂದೆಯೇ ಸ್ವೀಕರಿಸಿದ್ದರೂ ಅಧಿಕೃತವಾಗಿ ಪೀಠಾಧಿಪತಿಗಳಾದದ್ದು ಶ್ರೀ ಧೀರೇಂದ್ರತೀರ್ಥರ ಅನಂತರವೇ. ಇವರು ಶ್ರೀ ಧೀರೇಂದ್ರರಲ್ಲಿ ವಿದ್ಯಾಭ್ಯಾಸ ಮಾಡಿದವರಾದ್ದರಿಂದ ಪಾಂಡಿತ್ಯದಲ್ಲಿ ಉನ್ನತ ಸ್ಥಾನ ಗಳಿಸಿದ್ದರೆಂದು ಬೇರೆ ಹೇಳಬೇಕಿಲ್ಲ. 'ಜನ್ಮಾರಭ್ಯ ಲೌಕಿಕವನ್ನು ಸ್ವಪ್ನದಲ್ಲಿಯೂ ಅರಿಯರು' ಎಂದು ಇವರ ಬಗ್ಗೆ ಓರ್ವ ದಾಸರು ಹೇಳಿದ್ದನ್ನೂ ಗಮನಿಸಬೇಕು.

ಅವರ ಇತಿವೃತ್ತದ ಒಂದು ಮಹತ್ವದ ಘಟನೆಯೆಂದರೆ ಸುಪ್ರಸಿದ್ಧ ದಾಸ-ಯತಿಗಳಾದ ಶ್ರೀ ವ್ಯಾಸತತ್ತ್ವಜ್ಞರು ಇವರ ನೆಚ್ಚಿನ ಶಿಷ್ಯರಾದದ್ದು. ಶ್ರೀ ಭುವನೇಂದ್ರರೇ ಅವರಿಗೆ ಸನ್ಯಾಸದೀಕ್ಷೆ ಇತ್ತವರು. ಗದ್ವಾಲದವರಾದ ಶ್ರೀ ವ್ಯಾಸತತ್ತ್ವಜ್ಞರು ತಮ್ಮ ಭೂಪಾಲನಿಂದ ಶ್ರೀಗಳವರಿಗೆ ಆಮಂತ್ರಣ ಕೊಡಿಸಿ ಅಲ್ಲಿಗೆ ಕರೆದೊಯ್ದರು. ರಾಜನಾದ ಸೀತಾರಾಮ ಭೂಪಾಲನು ಅವರನ್ನು ಬಹುಕಾಲ ನಿಲ್ಲಿಸಿಕೊಂಡು, ಜಹಗೀರುಗಳನ್ನಿತ್ತು ಗೌರವಿಸಿದನು.

ಇನ್ನೊಂದು ವಿಶೇಷವೆಂದರೆ ತಮ್ಮ ಕಾಲದ ಪ್ರಮುಖ ಹರಿದಾಸರುಗಳ, ಎಂದರೆ ವಿಜಯದಾಸರ ಶಿಷ್ಯರೆಲ್ಲರೊಡನೆ ಆತ್ಮೀಯ ಸಂಬಂಧವಿರಿಸಿಕೊಂಡಿದ್ದರು. ಆ ನಿಮಿತ್ತದಿಂದ ದಾಸ ಸಾಹಿತ್ಯದ ಪೋಷಕರಾಗಿ ಬೆಳಗಿದರು.

ತುಂಬು ಜೀವನ ನಡೆಸಿ ಶ್ರೀಗಳು ಸಿದ್ಧಾರ್ಥಿ ಸಂವತ್ಸರದ ವೈಶಾಖ ಬಹುಳ ಸಪ್ತಮಿಯಂದು ಹರಿಪದವನ್ನು ಸೇರಿದರು. ಅವರ ವೃಂದಾವನವು ತುಂಗಾಭದ್ರತೀರದ ರಾಜವಳ್ಳಿಯಲ್ಲಿ ಇದೆ.

■ ■ ■

* 'ಗುರುಚರಿತೆ'ಯಲ್ಲಿ ಅವರು ರೌದ್ರಿ ಸಂವತ್ಸರದ ಶ್ರಾವಣ ಬಹುಳ ೮ ರಂದು ಗತಪ್ರಾಣರಾದರು ಎಂದಿದೆ. ಆದರೆ ಮೇಲೆ ಕೊಟ್ಟ ದಿನವನ್ನು ಸಮಕಾಲೀನರಾಗಿದ್ದ 'ಜಗನ್ನಾಥದಾಸರು ತಮ್ಮ ಹಾಡಿನಲ್ಲಿ ಕೊಟ್ಟಿದ್ದರಾದ್ದರಿಂದ ಇದೇ ಸರಿಯಾದದ್ದು.

## ೪೫

(ರಾಗ - ಕಾಂಬೋಧಿ, ಝಂಪೆತಾಳ)

**ನಮಿಸುವೆನು ಭುವನೇಂದ್ರ ಗುರುರಾಯರಾ**
ಅಮಿತ ಮಹಿಮಗೆ ಅಹೊ ರಾತ್ರಿಯಲಿ ಬಿಡದೆ ಪ

ಸಿದ್ಧಾರ್ಥಿನಾಮ ಸಂವತ್ಸರದ ವೈಶಾಖ
ಶುದ್ಧೇತರ ಸುಪಕ್ಷ ಸಪ್ತಮಿಯಲಿ
ವಿದ್ವತ್ಸಭಾ ಮಧ್ಯದಲಿ ರಾಮ ವ್ಯಾಸರ ಪ -
ದದ್ವಯನ್ನೈದಿದ ಮಹಾಮಹಿಮರ ಕಂಡು ೧

ರಾಜವಳ್ಳಿಯೆಂಬ ಪುರದಿ ಕರುಣದಿ ಪರಿ-
ವ್ರಾಜಕಾಚಾರ್ಯ ವರ ತನ್ನ ಪಾದ
ರಾಜೀವಯುಗಳ ಧೇನಸುತಿಪ್ಪರಿಗೆ ಕಲ್ಪ
ಭೂಜನಂದದಿ ಬೇಡಿದಿಷ್ಟಾರ್ಥ ಕೊಡುವರಿಗೆ ೨

ಶ್ರೀ ತುಂಗಭದ್ರಾ ತರಂಗಿಣಿ ತೀರದಲಿ
ವಾತಾತ್ಮಜನ ಪಾದ ಮೂಲದಲ್ಲೀ
ಪ್ರೀತಿಪೂರ್ವಕವಾಗಿ ವಾಸವಾದರು ಜಗ -
ನ್ನಾಥವಿಠಲನ ಕಾರುಣ್ಯ ಪಾತ್ರರನು ಕಂಡು ೩

■ ■ ■

## ೪೬

**ಭುವನೇಂದ್ರ ಯತಿರನ್ನ ಭುವನ ಪಾವನ್ನ**
ತವಕದಿಂ ವ್ಯಾಸರಾಯರ ಭಜಿಪ ಘನ್ನ ಪ.

ಅದ್ವೈತ ಮತ ಕೋಲಾಹಲ ಸುಜನಾಬ್ಧಿ ಸ -
ಮೃದ್ಧಿ ಎಂದೆನಿಪ ಮುನಿಪ

ಸದ್ಧರ್ಮ ಸತ್ಥಾಪನ ಸಕಲ ವಿದ್ಯಾಲಾಪ
ಅದ್ವೈತ ತ್ರಯ ವರ ಪ್ರವರ್ತಕನೇ ೧

ತಂತ್ರಸಾರಾಂತ ಆದ್ಯಂತಗಳ ಅರ್ಥವ ನಿ -
ರಂತರದಲಿ ಪೇಳಿ ಹರುಷದಿಂ
ಮಂತ್ರೋಪದೇಶವಂ ಮಾಡಿ ಮುದ್ರೆಯನಿತ್ತು
ಯಂತ್ರವಾಹಕನ ತೀರ್ಥವ ನೆರೆದ ಧೀರ ೨

ಮುನಿಕುಲೋತ್ತಮ ಶ್ರೀ ವರದೇಂದ್ರ ತೀರ್ಥ ಕರ -
ವನಜ ಸಂಜಾತ ಭುವನ ವಿಖ್ಯಾತ
ಅನಿಮಿತ್ತ ಬಂಧು ಗುರು ಮೋಹನ್ನ ವಿಠಲನ್ನ
ಕ್ಷಣ ಬಿಡದೆ ಧೇನಿ ಸುವ ಗುರುವೆ ಸುರತರುವೇ ೩

■ ■ ■

## ೪೭

[ರಾಗ: ಭೈರವಿ, ಆದಿತಾಳ]

**ಗುರುಗಳ ನೋಡಿರೈ ಉತ್ತಮ ವರಗಳ ಬೇಡಿರೈ** ಪ
ದುರುಳತಿಮಿರ ದಿನಕರ, ಶರಣರ ಸುರತರು,
ವರದೇಂದ್ರರ ಕರಪಂಕಜರುಹ ಅ.ಪ.
ಮಂಗಳ ವಿಗ್ರಹ ಮಧ್ವ ಮತಾಂಬುಧಿ ಸೋಮ
ಸದ್ಗುಣಧಾಮ

ಪಿಂಗಳನಿಭಸಂನ್ಯಾಸಕುಲೋತ್ತಮನೀತಾ ಲೋಕವಿಖ್ಯಾತಾ
ಸಂಗರಹಿತ ಕೌಪೀನ ಕಮಂಡಲಧರ - ದೋಷವಿದೂರ
ಮಂಗಳೆಪತಿ ಪದಭಜಕ, ಅಘೋರ ಕವೀಂದ್ರ
ಶ್ರೀಭುವನೇಂದ್ರ ೧

ಜನ್ಮಾರಭ್ಯವು ಲೌಕಿಕ ಸ್ವಪ್ನದೊಳರಿಯ - ಭೂಸುರವರ್ಯಾ
ಸುಮ್ಮನೆ ಈ ಪರಿ ಪದವಿಯ ಜಗದೊಳು ಬಹದು
ಆರಿಗೆ ಅಹುದೂ
ಬೊಮ್ಮನ ಸಂತತಿಯಿದು ಪುಸಿಯಲ್ಲವು ಸತ್ಯಾ -
ಭಜಿಸಿರಿ ನಿತ್ಯಾ
ಯಮ್ಮ ಬಳಿಯೊಳಿಹ ದುಷ್ಟಮತೇಂಧನ ದಾವಾ,
-ಸೌಖ್ಯವನೀವ ೨
ಧಾರಿಣಿಯೊಳು ವಿಸ್ತರಿಸಿದ ಸ್ವಮತವ ಧೀರಾ
ಗುಣಗಂಭೀರಾ
ಆರಿಂದೊಶ ಚರಿತೆಯ ಪೂರ್ತಿಸಿ ಪೇಳ್ವುದಕೆ -ಬಹುಸುಖ
ಮನಕೆ
ಶ್ರೀರಾಘವೇಂದ್ರರನುಗ್ರಹ ಪಾರಾವಾರಾದೊಳಗೆ ವಿಹಾರಾ
ಘೋರಿಸುತಿಹ ಸಂಸಾರ ಸಮುದ್ರಕೆ ಮುನಿಯೂ -
ಯತೀಶಿರೋಮಣಿಯೂ ೩
ಚಿರಕಾಲದ ಸುಕೃತ ದೊರಕಲು ವದಗುವದೂ,
ಸೇವೆಯಿವರದು
ಯಾರಳ್ಯೊಂದ್ಯೋಚಿಸದಲೆ - ಶರಣಾಗತರಾಗಿ - ಚಿಂತೆಯ ನೀಗೀ
ಎರವಿಲ್ಲದೆ ದುಃಖವ ಪರಿಹರಿಪರು ಹತ್ರೇ ಕರೆವರು ಮತ್ತೇ
ಸಿರಿ ಪೂರ್ಣಾಯು ಸುತಾದಿ ವಿಷಯಗಳ
ಕೊಡುವ - ದುರಿತವ ತರಿವ ೪
ತವಕದೊಳಿವರ ಪದಾಬ್ಜವ ಸೇವಿಪ ಭಕ್ತಾ - ಜೀವನ್ಮುಕ್ತಾ
ಕುವಲಯವದೊಳಗೀಗಿವರಿಗೆ ಸರಿಯಾರಿಲ್ಲಾ - ಕೇಳರಿಸೊಲ್ಲಾ
ಅವನೀಶರು ಎಂಬಾಹ್ವಯ ತಿಳಿಯಲಿಕುಂಟೇ -
ಅಧಿಕರೂ ವುಂಟೇ -
ಇವರಿಗೆರಗದಿರೆ ಒಲಿಯನು ಶ್ರೀಪ್ರಾಣೇಶವಿಠಲನು ಲೇಶ ೫

■ ■ ■

# ೪೮

(ವಾರ್ಧಕ ಷಟ್ಪದಿ)

ಶ್ರೀಮಧ್ವಮತವೆಂಬ ಕ್ಷೀರಪಾರಾವಾರಾ
ಸೋಮನೆನಿಸುತಿಹ ವರದೇಂದ್ರಕರಸಂಜಾತ
ನೀ ಮಹಿಯೊಳಾವಾವ ಪರಿ ಕಾಣಿಸುವ ನೋಡಿ
ರಾಮಪದ ಜಲಜಭೃಂಗ ಪ

ಕುಂಡಲಿಯೊ ಭಾರತಿಯೊ ಈಶನೊ ಎಂದು
ದ್ವಿಜತಂಡ ತುತಿಸುವುದು ಶ್ರೀ ಭುವನೇಂದ್ರರಾಯರ
ಕಂಡು ಪದಯುಕ್ತ ಪುರುಷಾಕಾರ ಶಿಖಾ -
ರಹಿತ ಕೂಡದಿದುಯೆನಲು ಪೇಳ್ವೆ

ದಂಡಧರ ಯೋಗದಾರ್ಢ್ಯದೊಳು ತಾ ಅಹಿಯಂತೆ
ಪಂಡಿತೇಶನು ವಾಗ್ಬಲದಲಿ ಭಾರತಿಯಂತೆ
ರುಂಡಮಾಲಿಯ ತೆರದಿ ತೋರುವರು ವೈರಾಗ್ಯದಲ್ಲಿ
ನಿರುತ ಭಜಿಸುವರಿಗೆ ೧

ವಿಧಿಯೊ ಅರ್ಕನೊ ಇಂದ್ರನೊ ಎಂಬ ತೆರದಿಂದ
ಬುಧಜನಕೆ ತೋರ್ವ ನಾಲ್ಮೊಗ ಖಗ ಸಹಸ್ರಾಕ್ಷ
ಇದು ಯೆಂತು ಸಾಮ್ಯವೆನೆ ಸರ್ವಜನರ -
ಯೋಗ್ಯತೆಯರಿವಂತೆ ಧಾತನಂತೇ

ಮದಡ ಜ್ಞಾನಾಖ್ಯ ತಮವಳಿವಲ್ಲಿ ರವಿಯಂತೆ
ಪದುಮೇಶನ ಗುಣವ ವಿಚಾರಿಸಲನೇಕಾಕ್ಷ
ಬಗೆಯಿಂದೊಪ್ಪುತಿಹ ನಮ್ಮ ಗುರುವ
ತುತಿಸುವೊದಕೆನ್ನ ವಶವೆ ೨

ಕಡಲೋ ಸುರಧೇನುವೋ ಹಂಸನೋ ಎಂಬಂತೆ
ಪೊಡವಿಗೆ ವಿರಾಜಿಸುವ ಉದಕಮಯವಾಗಿಹುದು

ಕಡು, ಚತುಷ್ಪಾದಿ ಅಂಡಜ ಜಂತು ಈ ಸಾಮ್ಯ
ಸಲ್ಲದೆನೆ ಸ್ವಲ್ಪ. ವಿವರ

ಒಡಲಿನೊಳು ಪ್ರಾಣೇಶವಿಠಲಮಣಿ ಪೊಳೆವುತಿದೆ
ಕೊಡುವ ಬೇಡಿದರವ ಅಮರರಾಕಳಿನಂತೆ
ಕುಡಿವಂತೆ ಹಂಸ ಪಯಜಲವುಳಿದು,
ದೋಷವೆಣಿಸದೆ ಬಿನ್ನಪವ ಲಾಲಿಪ ೩



## ೧೭. ಶ್ರೀ ಸುಬೋಧೇಂದ್ರತೀರ್ಥರು

(೧೭೯೯-೧೮೩೫)

ಹಾಗೂ

## ೧೮. ಶ್ರೀ ಸುಜನೇಂದ್ರತೀರ್ಥರು

(೧೮೦೭-೧೮೩೬)

ಈರ್ವರು ಯತಿಗಳ ಪರಿಚಯವನ್ನು ಒಟ್ಟಿಗೇ ಮಾಡಿ ಕೊಡುವುದಕ್ಕೆ ಕಾರಣವಿದೆ. ಪೂರ್ವಾಶ್ರಮದಲ್ಲಿ ಮುದ್ದುಕೃಷ್ಣಾಚಾರ್ಯರೆಂಬವರು ಶ್ರೀಮಠದಲ್ಲಿ ಪಾಠಪ್ರವಚನ ಮಾಡಿಕೊಂಡಿದ್ದರು. ಅವರೇನೂ ನಂಜನಗೂಡಿನ ಮನೆತನಕ್ಕೆ ಸೇರಿದವರಲ್ಲ. ಅವರ ಅಖಂಡ ಪಾಂಡಿತ್ಯವನ್ನು ಮನಗಂಡು ಶ್ರೀ ಭುವನೇಂದ್ರರು ಆಶ್ರಮವಿತ್ತು 'ಸುಬೋಧೇಂದ್ರ' ಎಂಬ ಅಭಿಧಾನವಿತ್ತರು. ಪೀಠಸ್ಥರಾದ ಮರುವರ್ಷವೇ ಶ್ರೀಗಳು ಸಂಚಾರ ಕೈಕೊಂಡರು. ಹೋದಲ್ಲೆಲ್ಲ ಸನ್ಮಾನದ ಜೊತೆಗೆ ಕನಕಗಿರಿ ಮುಂತಾದ ಸ್ಥಳಗಳನ್ನು ಉಂಬಳಿಯಾಗಿ ಪಡೆದರು. ಆ ಮುಂದೆ ಬೊಮ್ಮಗಟ್ಟ ಎಂಬಲ್ಲಿಗೆ ಬಂದಾಗ ದೇಹಾಲಸ್ಯ ಉಂಟಾಯಿತು. ಆ ಕಾರಣ, ಶ್ರೀ ಧೀರೇಂದ್ರರ ಪೂರ್ವಾಶ್ರಮದ ಮಗಳ ಮಗ ಜಯರಾಮಾಚಾರ್ಯರಿಗೆ ಆಶ್ರಮವಿತ್ತರು. (೧೮೦೭); ಸುಜನೇಂದ್ರರೆಂದರೆ ಇವರೇ. ಆದರೆ ಕೆಲ ಕಾಲದ ಮೇಲೆ ಶ್ರೀ ಸುಬೋಧೇಂದ್ರರ ಆರೋಗ್ಯ ಸುಧಾರಿಸಿತಾದ್ದರಿಂದ ತರುಣ ಶ್ರೀಸುಜನೇಂದ್ರರನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಕಳುಹಿಸಿದರು.

ಇವರು ಹೋದದ್ದು ಪುಣೆಗೆ. ಅಲ್ಲಿಯ ವಿಠಲೋಪಾಧ್ಯಾಯ ಎಂಬವರಲ್ಲಿ ನ್ಯಾಯಶಾಸ್ತ್ರವನ್ನು ಅಭ್ಯಾಸ ಮಾಡಿದರು. ಹಾಗೆ ಮರಳಿ ಬಂದ ಸುಜನೇಂದ್ರರಿಗೆ ಹಿರಿಯ ಸ್ವಾಮಿಗಳು ದಿಗ್ವಿಜಯರಾಮನ ಪ್ರತಿಮೆಯನ್ನಿತ್ತು ಪೂಜಾವ್ಯವಸ್ಥೆ ಮಾಡಿಕೊಟ್ಟರು. ಶ್ರೀ ಸುಜನೇಂದ್ರರು ಅಂದಿನಿಂದ ಪ್ರತ್ಯೇಕವಾಗಿಯೇ ಸಂಚಾರಕ್ಕೆ ತೊಡಗಿದರು.

ಅವರು ಮೊದಲಿಗೆ ಬಂದದ್ದು ಮೈಸೂರ ಪ್ರದೇಶಕ್ಕೆ. ಅಲ್ಲಲ್ಲಿಯ ಸಂಚಾರ ಮುಗಿಸಿ ನಂಜನಗೂಡಿನಲ್ಲಿರುವ ಪೂರ್ಣಯ್ಯನ ಛತ್ರದಲ್ಲಿ ಉಳಿದರು. ಇತ್ತ ಆಗಿನ ಮೈಸೂರ ಮಹಾರಾಜ ಮುಮ್ಮಡಿ ಕೃಷ್ಣರಾಜರ ಆಶ್ರಯವನ್ನು ಕೋರಿ ಪುಣೆಯಿಂದ ತ್ರ್ಯಂಬಕ ಶಾಸ್ತ್ರಿಗಳೆಂಬ ಘನ ವಿದ್ವಾಂಸರು ಮೈಸೂರಿಗೆ ಬಂದವರು, ಇರುತಿರುತ ಆಸ್ಥಾನದ ಪಂಡಿತರೊಡನೆ ವಾಕ್ಯಾರ್ಥ

ಮಾಡುವ ಅಪೇಕ್ಷೆಯನ್ನು ವ್ಯಕ್ತ ಮಾಡಿದರು. ಶಾಸ್ತ್ರಿಗಳ ವಿದ್ವತ್ತಿನ ಆಳವನ್ನು ಊಹಿಸಿದ್ದ ಮಹಾರಾಜರಿಗೆ ಒಂದು ಬಗೆಯ ಅಳುಕು. ಶ್ರೀ ಸುಜನೇಂದ್ರರು ನಂಜನಗೂಡಿನಲ್ಲಿ ಬಂದಿರುವುದನ್ನು ತಿಳಿದು ಮಹಾರಾಜರು ಅಲ್ಲಿಗೆ ತ್ರ್ಯಂಬಕಶಾಸ್ತ್ರಿಗಳೊಡನೆಯೇ ಆಗಮಿಸಿದರು. ತಾವು ಪುಣೆಯಲ್ಲಿದ್ದಾಗ ಶಾಸ್ತ್ರಿಗಳ ವಿದ್ವತ್ಖ್ಯಾತಿಯನ್ನು ಕೇಳಿದ್ದರು. ಇಬ್ಬರನ್ನೂ ಶ್ರೀಗಳು ಆದರದಿಂದ ಬರಮಾಡಿಕೊಂಡರು. ಮಾತಿನ ಮಧ್ಯೆ ಶಾಸ್ತ್ರಿಗಳು 'ಆ ಕಾರೋ ಹ್ರಸ್ವಃ ' ಎಂದು ಹೇಳಿ ನಕ್ಕರಂತೆ. ಶ್ರೀಗಳವರದು. ಗಿಡ್ಡದಾದ ನಿಲುವು. ತಕ್ಷಣ ಶ್ರೀಗಳು ಉತ್ತರಿಸಿದರು. "ಆಕಾರೋವು ಅದೆಂತು ಹ್ರಸ್ವವಾದೀತು?" ಅವತ್ತು ದ್ವಾದಶಿ ಇದ್ದು ಪೂಜೆ ಮುಂತಾದ ಆಹ್ನಿಕಗಳು ಮುಗಿದಿದ್ದವು. ಶಾಸ್ತ್ರಿಗಳ ಊಟವಾದ ಮೇಲೆ ವಾಕ್ಯಾರ್ಥವು ಮೊದಲಾಯಿತು. ಮಧ್ಯಾಹ್ನದವರೆಗೂ ಶಾಸ್ತ್ರಿಗಳ ಭರಭರಾಟೆಯ ವಾದದ್ದೇ ಮೇಲುಗ್ಯೆ. ಆದರೆ ಇಳಿಹೊತ್ತು ಆದಂತೆಲ್ಲ, ಶ್ರೀಗಳವರ ಮಾತೇ ರಾರಾಜಿತೊಡಗಿತು. ಅಲ್ಲಿಯೇ ಇದ್ದ ಮಹಾರಾಜರಿಗೆ ತುಂಬಾ ಸಂತೋಷವಾಯಿತು. ತಾವು ಧರಿಸಿದ್ದ ಮುತ್ತಿನ ಕಂಠಿಯನ್ನೇ ಶ್ರೀಗಳವರಿಗೆ ಅರ್ಪಿಸಿದರು. ಆಗ ಶ್ರೀಗಳವರು ಹೇಳಿದರು "ತಮ್ಮ ಔದಾರ್ಯ ದೊಡ್ಡದು. ಆದರೆ ಇದನ್ನು ಶಾಸ್ತ್ರಿಗಳಿಗೇ ಕೊಟ್ಟು ಬಿಡುವೆ. ಇಂತಹ ಪಂಡಿತರು ನಿಮ್ಮ ಆಸ್ಥಾನದಲ್ಲಿರುವುದು ಭೂಷಣ ಪ್ರಾಯ." ಇದಲ್ಲವೆ ಗುಣ ಗ್ರಾಹಕತ್ವ!

ಇದರಿಂದ ಮಹಾರಾಜರಿಗೆ ಶ್ರೀಗಳವರ ಮೇಲಿನ ಭಕ್ತಿ ಇಮ್ಮಡಿಸಿತು. ಆಗ ಶ್ರೀಗಳು ಇದೆಲ್ಲ ತಮ್ಮ ಗುರುಗಳ ಪ್ರಭಾವ ಎಂದು ವಿವರಿಸಿದರು. ಪರಿಣಾಮವಾಗಿ ಮಹಾರಾಜರು ಶ್ರೀ ಸುಬೋಧೇಂದ್ರರನ್ನೂ ಅರಮನೆಗೆ ಬರಮಾಡಿಕೊಂಡು ರಾಜೋಪಚಾರ ಸಲ್ಲಿಸಿದ್ದರು. ಯತಿದ್ವಯರ ಈ ಸಮಾಗಮವು ಮೈಸೂರಿನ ಜನಗಳಿಗೆಲ್ಲ ಚಿತ್ತಾಕರ್ಷಕವಾಗಿದ್ದಿತು. ಮಹಾರಾಜರು ನಂಜನಗೂಡಿನಲ್ಲಿರುವ ಪೂರ್ಣಯ್ಯನವರ ಛತ್ರವನ್ನೇ, ಮಠಕ್ಕೆ ಧಾರೆಯೆರೆದು ಕೊಟ್ಟರು. ಇಷ್ಟು ಮಾತ್ರವಲ್ಲ ಮತ್ತೂ ಒಮ್ಮೆ ಅರಮನೆಗೆ ಬರಮಾಡಿಕೊಂಡರು.

ಆ ಮುಂದೆ ಇಬ್ಬರೂ ಯತಿಗಳು ನಂಜನಗೂಡಿನಲ್ಲೇ ಹೆಚ್ಚು ಸಮಯ ಕಳೆದರು. ಶ್ರೀ ಸುಬೋಧೇಂದ್ರರು ವೃಂದಾವನಸ್ಥರಾದ ಮೇಲೆ ( ಚೈತ್ರ ಬಹುಳ ತೃತೀಯ ) ಮರುವರ್ಷವೇ ಶ್ರೀ ಸುಜನೇಂದ್ರರೂ ಅಲ್ಲಿಯೇ ಹರಿಪದವನ್ನೂ ಸೇರಿದರು. ( ಕಾರ್ತಿಕ ಬಹುಳ ಅಷ್ಟಮಿ ).

■ ■ ■

# ೪೯

**ಪಾಹಿ ಪಾಹಿ ಜಿತಮಾರ**

ಪಾಹಿ ಸುಬೋಧೇಂದ್ರ ಸಮೀರ ಪ

ಮಹಾ ಮತಾಬ್ಧೀಂದು ದೀನಾಮರ
ಮಹೀಜ, ಸುಹಿತ ಮಹಿತ
ಪಾಹಿಮಾಂ ಪಾಹಿ ಅ.ಪ

ನಿರ್ಮಲಾತ್ಮ ಸದ್ಗುರು ಧೀರ
ಕರ್ಮ ವಿಷಯಾಪೇಕ್ಷ ದೂರ
ಧರ್ಮಾಸಕ್ತ ಲೋಕೋದ್ಧಾರ
ಶರ್ಮ ಸುಶರ್ಮಾದಭರ್ಮಾಂಗ ಮರ್ಮಜ್ಞ ೧

ಅರ್ಕಮಹಿಮನೆ ಧೀಮಂತ
ಅರ್ಕಜನೊಲಿದಾ ನೀ ಶಾಂತ
ಮರ್ಕಟದುರ್ವಾಧಿ ಧ್ವಾಂತ
ಅರ್ಕ, ಕುತರ್ಕ ಸಂಪರ್ಕಾಹ ಅರ್ಕಾಭ
ಪಾಹಿಮಾಂ ಪಾಹಿ ೨

ತೀರ್ಥಪಾಲಾ ಭಕ್ತಾಧೀನ
ತೀರ್ಥಾಂಘ್ರಿ ಪ್ರಾಣೇಶವಿಠಲನ
ತೀರ್ಥದೂತ ನೀನಿದ್ದ ಸ್ಥಾನ
ತೀರ್ಥವು, ತೀರ್ಥಪ ತೀರ್ಥಪ ತೀರ್ಥಮಾಂ
ಪಾಹಿಮಾಂ ಪಾಹಿ ೩



## ೫೦

[ಧಾಟಿ : ರಾಮದೂತನ ಪಾದ ಎಂಬಂತೆ ]

ಗರಳಾ ಪುರದಿ ಮೆರೆವ ಗುರು ಸುಬೋಧೇಂದ್ರರ
ಚರಣ ವಾರಿಜ ಸ್ತುತಿಪೇ ಪ

ಸರಳ ಸದ್ಗುಣ ತರುವ ನೆರಳಲಿ ಬರಲು ಸುಜನಕೆ ಆಶ್ರಯ ನೀಡಿ
ತರುಳರಂದದಿ ವಶರು ತಾವಾಗಿ ಬಹುಳ ಶಾಸ್ತ್ರಾರ್ಥ ಒರೆದು ಪೊರೆದಾ ಅ.ಪ.

ಮುದ್ದು ಕೃಷ್ಣಾರ್ಯ ಪ್ರಸಿದ್ಧ ಪಂಡಿತರೆನಿಸಿ । ಸದ್ವೈಷ್ಣವ ವೇದಾಂತದೀ
ಮಧ್ವಪ್ರಿಯ ಭುವನೇಂದ್ರ ಗುರುವರ್ಯ ಶುದ್ಧ ವಿಧಿಯಲಿ ಆಶ್ರಮ ನೀಡೆ
ಪದ್ಮನಾಭನ ಧ್ಯಾನ ಗೈದು ಕುಶಾಗ್ರ ಬುದ್ಧಿಗಳೆನಿಸಿ ಮೆರೆದಾ ೧

ಕನಕ ಗರ್ಭಾರ್ಚಿತ ಶ್ರೀ ಮೂಲರಾಮನ । ಅನುದಿನ ವೈಭವದೀ
ಕನಕ ಮಂಟಪದೊಳಗೆ ಪೂಜಿಸಿ ಕನಕಗಿರಿ ಜಹಗೀರು ಗಳಿಸಿ
ದಿನವು ದುರ್ಮತದವರ ಜಯಿಸಿ ಇನನ ಕಾಂತಿಲಿ ಜಗದಿ ಶೋಭಿಪ ೨

ಶ್ರೀ ಸಮೀರನ ಕ್ಷೇತ್ರ ಬೊಮ್ಮಾಗಟ್ಟಿಯಲಿ । ಶ್ರೀ ಸನ್ಯಾಸವ ನೀಡಲೂ
ತೋಷದಿ ಜಯರಾಮ ಆರ್ಯಗೆ ಶ್ರೀಗುರು ಸುಜನೇಂದ್ರ ನಾಮವಿಟ್ಟು
ಸೋಸಿಲಿ ಲಕುಮೀಶ ಧ್ಯಾನದಿ ಚೈತ್ರ ವದ್ಯ ತದಿಗೆಯ ಹರಿ ಸೇರ್ದ ೩

■ ■ ■

## ೫೧

ಧಾಟಿ : ಬಾರೋ ಮನೆಗೆ ಗೋವಿಂದಾ

ನಮಿಸಿ ಬೇಡುವೆ ಗುರುವೆ । ಶ್ರೀ ಸುಜನೇಂದ್ರರ ಪ.
ಶ್ರಮಿಸಿ ಭವದೊಳು ಭ್ರಮಿಸಿ ಕೆಟ್ಟೆನು ತಪಸಿಗಳ ನಾ ಸೇರದಾದೆನು
ತ್ಯಜಿಸಿ ಸತ್ಕರ್ಮ ಮೂಢನಾದೆನು ತಿಳಿಸಿ ಅಸುಶಾಸ್ತ್ರ ಎನ್ನ ಕೈಪಿಡಿ ಅ.ಪ.

ಪೂರ್ವಾಶ್ರಮದ ದೌಹಿತ ಧೀರೇಂದ್ರರಿಗೆ । ತವ ನಾಮ ಜಯರಾಮನೆಂದಿತ್ತ
ಸುಬೋಧೇಂದ್ರರು ಪವನಕ್ಷೇತ್ರ ಬೊಮ್ಮಗಟ್ಟಿ
ಅಲ್ಯಾಶ್ರಮಕೆ ತವಕದಿ ಮಾಡಿ ಗಟ್ಟಿ
ಸ್ಥಾಪಿಸಿ ಶ್ರೀ ಮೂಲರಾಮಚಂದ್ರನ ಕಪಿಯ ಜನ ಸಮ್ಮೇಳದಿಂದಲಿ
ಭುವನ ಮೋಹಿಪ ವಿಭವದಿಂದಲಿ ಕರೆಯೆ ಕರೆದೊಡ್ಡವರೆ ನಿಮಗೆ ೧

ಗುರುವೀಗೆ ಪ್ರಕೃತಿ ಗುಣವಾಗೆ ಆಜ್ಞಾ ನೀಡೆ ಮರುತಾ ಶಾಸ್ತ್ರಕೆ ಪುಣೆಗೆ ಪೋಗೆ
ವಿಠಲೋಪಾಧ್ಯಾಯ ಒರೆದರು ಚತುಃಶ್ಯಾಸ್ತ್ರ ನಿಮಗೆ
ಒಂದಬ್ದದೊಳಗೆ ಭರದಿಂದ ಕಲಿತಿಲ್ಲಿಗೆ
ಚರಣ ದರ್ಶನ ಮಾಡೆ ಗುರುಗಳು ತ್ವರದಿ ಶ್ರೀ ಜಯರಾಮನನು ಯಿತ್ತು
ಹರುಷದಿಂದಲಿ ಭರದಿ ದುರ್ಮತ ಮುರಿದು ಬಾಳೆಂದ್ವರವಗೊಂಡಾ ೨

ಕೃಷ್ಣರಾಜೇಂದ್ರ ಮುಮ್ಮುಡಿ ನಂಜನಗೂಡ್ಗೆ ದುಷ್ಟತ್ರ್ಯಂಬಕ ಶಾಸ್ತ್ರಿಗಳ್ಜೋಡಿ
ಕರೆದೊಯ್ಯೆ ವಾದಕೆ ಶಿಷ್ಟ ಸುಜನೇಂದ್ರ್ಯತಿಗಳು
ವಾದದಲಿ ಸೋಲಿಸೆ ಪಟ್ಟು ಸಂತಸ ಕಂಠ್ಯಾದಿಗಳು
ಇಟ್ಟು ಯತಿ ಪದ ಮುಟ್ಟಿ ಪ್ರಾರ್ಥಿಸೆ ಥಟ್ಟನೇ ಶಾಸ್ತ್ರಿಗಳಿಗೀಯುತ
ಪಟ್ಟ ಸುಜ್ಞಾನೇಂದ್ರರಿಗೆ ಕಟ್ಟಿ ಧಿಟ್ಟ ಶ್ರೀ ಲಕುಮೀಶನ ಸೇರ್ದ ೩



# ೧೯. ಶ್ರೀ ಸುಜ್ಞಾನೇಂದ್ರತೀರ್ಥರು

( ೧೮೩೬-೧೮೬೧ )

ಶ್ರೀ ಸುಜನೇಂದ್ರರು ಶ್ರೀ ಧೀರೇಂದ್ರತೀರ್ಥರ ದೌಹಿತ್ರರಾಗಿದ್ದರೆ, ಇವರು ಪ್ರಪೌತ್ರರಾಗಿದ್ದವರು. ಪೂರ್ವದ ಹೆಸರು ರಾಘವೇಂದ್ರಾಚಾರ್ಯ ಎಂಬುದು. ಇವರ ಕಾಲದಲ್ಲಿ ಇಂಗ್ಲಿಷರ ಆಳ್ವಿಕೆ ನೆಲೆಗೊಂಡಿತ್ತು. ಆಗ ತಪ್ಪಿ ಹೋಗಲಿದ್ದ ಶ್ರೀಮಠದ ಕೆಲವು ಜಮೀನು ಮುಂತಾದುವನ್ನು ಮರಳಿ ಪಡೆಯುವುದಕ್ಕೆ ವಿಶೇಷವಾಗಿ ಯತ್ನಿಸಬೇಕಾಯಿತು. ಕಾಗದ ಪತ್ರಗಳನ್ನು ಸಿದ್ಧಪಡಿಸಿ ದಾಖಲೆಯಾಗಿ, ಮಠದಲ್ಲಿ ಉಳಿಸಿಕೊಳ್ಳಬೇಕಾಗಿ ಬಂದಿತು. ಇಂಥ ಒಂದು ಸಂದರ್ಭದಲ್ಲಿ ಓರ್ವ ಬ್ರಿಟಿಶ್ ಅಧಿಕಾರಿಯನ್ನು ಕಾಣಬೇಕಾಗಿ ಸೂಚನೆ ಬಂದಾಗ, ಅವರು ಮ್ಲೇಂಛನ ದರ್ಶನ ಕೂಡದೆಂದು ಹೋಗಲಿಲ್ಲ. ಆಗ ಆ ಸಾಹೇಬನೇ ಬಂದು ಶ್ರೀಗಳವರ ತೇಜೋಮಯ ವ್ಯಕ್ತಿತ್ವಕ್ಕೆ ಮಾರುಹೋಗಿ ಕೆಲಸ ಮಾಡಿಕೊಟ್ಟನಂತೆ.

ಸುಜ್ಞಾನೇಂದ್ರರು ಪ್ರಣವೋಪಾಸಕರು. ಹಲವು ಬಾರಿ ಸುಧಾ ಪ್ರವಚನ ಮಾಡಿದ ಮಹಾಮಹಿಮರು. ಚಂದ್ರಿಕಾಮಂಡನವೆಂಬ ಗ್ರಂಥವನ್ನು ರಚಿಸಿದ್ದಾರೆ. ಇವರು ಕೂಡ ಹೆಚ್ಚಿನ ವರ್ಷಗಳನ್ನು ನಂಜನಗೂಡಿನಲ್ಲಿ ಕಳೆದು ಶ್ರಾವಣ ಬಹಳ ಚತುರ್ಥಿಯ ದಿವಸ ಪರಂಧಾಮವನ್ನು ಸೇರಿದರು.

■ ■ ■

# ೨೦. ಶ್ರೀ ಸುಧರ್ಮೇಂದ್ರ ತೀರ್ಥರು

( ೧೮೬೧-೧೮೭೨ )

ಇವರ ಪೂರ್ವಾಶ್ರಮದ ಹೆಸರು ಗಣೇಶಾಚಾರ್ಯನೆಂದಿದ್ದುದು ಒಂದು ವಿಶೇಷ. ಶ್ರೀ ಸುಜ್ಞಾನೇಂದ್ರರು ಇವರನ್ನು ಉತ್ತರಾಧಿಕಾರಿಯಾಗಿ ಆಯ್ದುದಕ್ಕೆ ಇವರ ಸಚ್ಛಾಸ್ತ್ರ ಪಾಂಡಿತ್ಯವೊಂದೇ ಕಾರಣ. ತಮ್ಮ ಹೆಚ್ಚಿನ ಅವಧಿಯನ್ನು ಮಂತ್ರಾಲಯದಲ್ಲಿ ಶ್ರೀ ಗುರುರಾಜರ ಸನ್ನಿಧಿಯಲ್ಲೇ ಕಳೆದು ಪುಷ್ಯ ಬಹುಳ ಪಂಚಮಿಯಂದು ವೃಂದಾವನಸ್ಥರಾದರು.

■ ■ ■

## ೨೧. ಶ್ರೀ ಸುಗುಣೇಂದ್ರತೀರ್ಥರು

( ೧೮೭೨ -೧೮೮೪ )

ಇವರು ಶ್ರೀ ಸುಜ್ಞಾನೇಂದ್ರರ ಪೂರ್ವಾಶ್ರಮದ ಮಗ. ಇವರ ಕಾಲದಲ್ಲಿ ಆಂಧ್ರ ಪ್ರದೇಶದಲ್ಲಿ ಭೀಕರ ಬರಗಾಲ ತೋರಿತು. ಶ್ರೀಗಳವರು ಯಥಾಶಕ್ತಿ ಶ್ರೀಮಠದಿಂದ ಅನೇಕ ಬಡಜನತೆಗೆ ಆಶ್ರಯವಿತ್ತರು. ಶ್ರೀ ಉತ್ತರಾದಿಮಠದವರೊಡನೆ ವಿಶೇಷ ಸೌಹಾರ್ದ ಸಂಬಂಧವನ್ನಿಟ್ಟುಕೊಂಡಿದ್ದು ಅವರ ಒಂದು ಆಸ್ತಿಯ ವಿಚಾರವಾಗಿ ನೆರವಾದರೆಂದೂ ತಿಳಿದು ಬರುತ್ತದೆ. ಮಾರ್ಗಶೀರ್ಷ ಶುದ್ಧ ಪೌರ್ಣಮೆ ದಿನ ಚಿತ್ತೂರಿನಲ್ಲಿ ವೃಂದಾವನಸ್ಥರಾದರು. ಇವರ ಸ್ತುತಿಪರವಾದ 'ಪಂಚರತ್ನಮಾಲಾ' ಎಂಬುದನ್ನು ಶಿಷ್ಯ ಶ್ರೀ ಸುಪ್ರಜ್ಞೇಂದ್ರರು ರಚಿಸಿದ್ದಾರೆ.

## ೨೨. ಶ್ರೀ ಸುಪ್ರಜ್ಞೇಂದ್ರತೀರ್ಥರು

( ೧೮೮೪-೧೯೦೩ )

ಇವರು ಸುಗುಣೇಂದ್ರರ ಅಣ್ಣನ ಮಗ. ಮೈಸೂರಲ್ಲಿ ಶ್ರೀ ಚಾಮರಾಜೇಂದ್ರ ಒಡೆಯರು ಆಳುತ್ತಿದ್ದ ಕಾಲವದು. ನಂಜನಗೂಡಿನಲ್ಲಿ ಇವರು ಹೆಚ್ಚಾಗಿ ಇರುತ್ತಿದ್ದುದರಿಂದ ಮಹಾರಾಜರ ಆಸ್ಥಾನದ ಹಲವಾರು ವಿದ್ವಾಂಸರು ಇವರ ಬಳಿಗೆ ಬಂದು ಧರ್ಮಶಾಸ್ತ್ರದ ಚರ್ಚೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಮಾಘ ಬಹುಳ ಷಷ್ಠಿಯಂದು ಇವರ ಪುಣ್ಯತಿಥಿ ಬರುತ್ತದೆ.

■ ■ ■

### ೫೨

[ಧಾಟಿ : ಧೀರನ ನೋಡಿರೈ ಎಂಬಂತೆ]

ಸುಜ್ಞಾನೇಂದ್ರಾರ್ಯ । ಗುರುಶ್ರೀ । ಅಜ್ಞಾನ ಪರಿಹರಿಸಯ್ಯ ಪ.
ಅಜ್ಞದಿ ಮನ ಶಿವ ಧನು ಭಗ್ನನಲಿ
ಸುಜ್ಞಾನವಿತ್ತು ಆಗಮಜ್ಞನ ಮಾಡೈ ಅ.ಪ.

ಪೂರ್ವಾಶ್ರಮದ ಪ್ರಪೌತ್ರ । ಧೀರೇಂದ್ರರ
ದುರ್ವಾದಿಗೆ ಭಯಗಾತ್ರ
ಗುರು ಸುಜನೇಂದ್ರತೀರ್ಥ । ಆಶ್ರಮ ನಿನಗೀಯೆ
ಸಿರಿ ಸಾರ್ವಭೌಮತ್ವಾ ·
ಸಾರ್ವಜನರಿಂದ ಮನ್ನಣೆ ನೀವ್ಪೊಂದಿ
ಸರ್ವದ ಶ್ರೀ ಮೂಲರಾಮನ ತುತಿಸಿದ ೧

ನಂಜನಗೂಡಿಲಿ ನೆಲ್ಸೀ । ಇವರು ಪ್ರ -
ಭಂಜನ ಶಾಸ್ತ್ರವ ಪಠಿಸಿ
ಕಂಜಾಕ್ಷನ ಕೃಪೆ ಗಳಿಸೀ । ಪ್ರಣವವ
ಸಂಜೆ ಹಗಲು ರಾತ್ರಿ ಜಪಿಸಿ
ರಂಜಿತ ಚಂದ್ರಿಕ ಮಂಡನ ರಚಿಸುತ
ಸಂಜೆಚರರು ತಾವಂಜುವ ಕೃತಿವುಳ್ಳ ೨

ಅಧಿಕಾರಿ ಮ್ಲೇಂಛನು ಬರಲೂ । ಪೀಠದಿರೆ
ಒದಗಿದ ದರ್ಶನಕೆನಲೂ
ಬುಧರಿವರು ಕಾಣದೆ ಇರಲೂ । ನುಡಿ ಕೇಳಿ
ಹೆದರುತ ಓಡಿದ ಮರುಳೂ
ಸುಧಾಮಂಗಳ ನವವಾರ ಮಾಡುತ
ವಿದುರಪ್ರಿಯ ಶ್ರೀ ಲಕುಮೀಶನೊಲಿಸಿದ ೩

■ ■ ■

## ೫೩

### [ಧಾಟಿ : ತಂಗಿಗೆ ಹೇಳಿದ ಕೃಷ್ಣ]

ವಂದಿಸುವೆ ಶ್ರೀಮಂತ್ರಮಂದಿರದಿ ರಾಜಿಪರೆ
ಬಂದೆನ್ನ ಪೊರೆಯಿರ್ರೈ ಸುಧರ್ಮೇಂದ್ರರೆ ಪ

ಮಂದಮತಿಗಳ ಕೂಡಿ ವೃಂದಘುವ ಗೈದವನ
ಕುಂದೆಣಿಸದೆ ಸತತ ತಂದೆ ರಕ್ಷಿಸಿರೆಂದು ಅ.ಪ.

ಶೀಲ ಸದ್ಗುಣ ಧರ್ಮ ಮೇಲಾದ ಗುಣ ಪೊಂದಿ
ಕಾಲ ವೈರಿಯ ದಿವ್ಯ ಬಾಲಾಖ್ಯರೆನಿಸೀ
ಕಾಲಕಾಲದಿ ತುಲಸೀ ಹೂಗಳಿಂದಲಿ ಚಲುವ
ಮಾಲೆ ಪೂಜೆಗಿತ್ತು ರಾಯರನೊಲಿಸಿದರ ೧

ಸುಜ್ಞಾನೇಂದ್ರ ಗುರು ರಾಮಾಜ್ಞೆಯನು ಪೊಂದಿ
ಆಜ್ಞೆ ನೀಡೆ ಮಂತ್ರಮನೆಯಿಂದ ಬರಲೂ
ಸೂಜ್ಞ ಸಲಹದಿ ದಿವ್ಯ ಸನ್ಯಾಸವನು ಕೊಡಲು
ಭಗ್ನ ಕಾರ್ಮುಕ ಶಿವನ ಮಗ್ನಮತಿ ಪೂಜೆಗೈಯ್ಯೆ ೨

ಶ್ರೀಮದಾರ್ಯರ ಸ್ಮೃತಿಯ ನೇಮದಲಿ ಪರಿಸುತ್ತ
ಶ್ರೀ ಮೂಲರಾಮಾದಿಗಳ ಪೂಜಿಸೀ
ಶ್ರೀ ಮಹಾಸಂಸ್ಥಾನ ಸುಗುಣೇಂದ್ರರಿಗಿತ್ತು
ಭೂಮಿಯೊಳು ಬಾಳೆಂದು ಲಕುಮೀಶನೊಲಿಸಿದರ ೩

■ ■ ■

## ೫೪

**ಶ್ರೀಗುರು ಸುಗುಣೇಂದ್ರತೀರ್ಥರ ಪದಕಮಲ**
ಬಾಗಿ ನಮಿಸುವೆ ಸತತ ಸದ್ಗುಣವೆ ಕರುಣಿಸಲಿ ಪ

ರಾಗ ಸಜ್ಜನದಿತ್ತು ತ್ಯಾಗಾದಿಗಳ ತಿಳಿಸಿ
ವೇಗದಲಿ ಜನ್ಮಾದಿ ರೋಗಾದಿ ಓಡಿಸಲಿ ಅ.ಪ.

ಸುಧರ್ಮೇಂದ್ರತೀರಥರ ಪದುಮಕರ ಸಂಜಾತ
ಮುದವೀವ ಸುಜ್ಞಾನೇಂದ್ರರ ಮೊದಲಾಶ್ರಮ ಜಾತ
ಮುದಮುನಿಯ ದಿವ್ಯ ಶಾಸ್ತ್ರ ಉದಯಾದಿ ಬೋಧಿಸುತ
ವಿಧಿ ಜನಕ ಶ್ರೀ ಮೂಲರಾಮನ ಭಜಿಪಾತ ೧

ಧಾತು ಈಶ್ವರದಬ್ದ ಘಾತುಕದ ಕ್ಷಾಮ ಬೀಳೆ
ಆತುಕೊಂಡಾರಿವರು ಮಠದ ಸಂಪದದಿಂದಾ
ಭೂತಳದಿ ಅನ್ನದಾನ ಮಾತುಮಾತಿಗೆ ನೀಡಿ
ಯಾತನೆಯ ತಾವ್ಕಳೆದು ವ್ರಾತ ಜನರನು ಕಾಯ್ದ ೨

ಚಿತ್ತಜನಪಿತ ಶ್ರೀ ಲಕುಮೀಶನಂಘ್ರಿಯನು
ಚಿತ್ತದಲಿ ಧ್ಯಾನಿಸುತ ಗುರುರಾಜ ಆರ್ಯರಿಗೆ
ಇತ್ತು ಸುಪ್ರಜ್ಞೇಂದ್ರರೆಂಬ ಆಶ್ರಮದಿ ನಾಮವಿಟ್ಟು
ಚಿತ್ತೂರಿನಲಿ ನಿಂತ ಮಾರ್ಗಶಿರ ಪೂರ್ಣಿಮದಿ ೩

■ ■ ■

## ೫೫

**ದಯದಿ ಪಿಡಿಯೊ ಕೈಯ್ಯ । ಸುಪ್ರಜ್ಞೇಂದ್ರರಾಯ** ಪ.

ದಯದಿ ಕೈ ಪಿಡಿದು ಭವ ಭಯವ ನಿವಾರಿಸ್ಯೆ
ಹಯವದನನ ಧ್ಯಾನ್ನುಪಾಯವನ ತಿಳಿಸಯ್ಯ ಅ.ಪ.

ಶ್ರೀ ಗುರು ಸುಗುಣೇಂದ್ರತೀರ್ಥರ ಪದ್ಮಕರಜಾತ
ಯೋಗಿಕುಲತಿಲಕಾರ್ಯ ಮಧ್ವರ ಶಾಸ್ತ್ರವರಿತಾತ
ಭಾಗವತ ಪ್ರಿಯ ಬಾಗಿದವರಿಷ್ಟಾರ್ಥಗರೆವಾತ
ನಾಗಶಯನ ಶ್ರೀ ಮೂಲರಾಮನ ಸತತ ಭಜಿಪಾತ
ನಾ ನಿನ್ನ ದೂತಾ ೧

ಚಾಮರಾಜ ಒಡೆಯ ಮಹಿಷೂರ ಕರೆಯಲರಮನೆಗೆ
ಶ್ರೀ ಮಹಾ ಸಂಸ್ಥಾನದೊಡನೆ ಹೊರಟು ಅಲ್ಲೀಗೆ
ಶ್ರೀ ಮೂಲ-ಜಯ-ದಿಗ್ವಿಜಯರಾಮರ ಅರ್ಚಿಸೆ ನಿನಗೆ
ಶ್ರೀಮಂತ ಗೌರವ ಸಲಿಸೆ ಆಶಿಷ ಗೈದೆ ಅರಸನಿಗೆ
ವಂದಿಸುವೆ ನಿನಗೇ ೨

ಆಸ್ಥಾನ ಪಂಡಿತ ಕೌಲಿಗಿ ಶ್ರೀ ಶೇಷಗಿರಿಯಾತಾ
ಸಂಸ್ಥಾನಧೀಶನೆ ನಿನ್ನ ವಿದ್ವತ್ತ್ನೋಡಿ ಮಣಿದಾತಾ
ಹೃಸ್ಥಾನಗತ ಶ್ರೀ ತತ್ವದೇವತ ಲಯವ ನೆನೆದಾತಾ
ಸ್ವಸ್ಥಾನ ನಂಜನಗೂಡು ಬೃಂದಾವನವ ಸೇರ್ದಾತಾ
ಲಕುಮೀಶ ಪ್ರೀತಾ ೩

■ ■ ■

# ೨೩. ಶ್ರೀ ಸುಕೃತೀಂದ್ರ ತೀರ್ಥರು

( ೧೯೦೩ - ೧೯೧೨ )

ಹೊಸಯುಗದ ಇಪ್ಪತ್ತನೆಯ ಶತಮಾನವು ಉದಯಗೊಂಡ ಕಾಲವದು. ಶ್ರೀಮಠದ ವರ್ಚಸ್ಸು ಎದ್ದುಕಾಣುವಂತೆ ಇವರು ಪೀಠಾಧಿಪತ್ಯವನ್ನು ವಹಿಸಿದರು. ನ್ಯಾಮಗೊಂಡ ಶ್ಯಾಮಾಚಾರ್ಯ ಮತ್ತು ಹುಲಿ ಹನುಮಂತಾಚಾರ್ಯ ಎಂಬ ಆಗಿನ ಮಹಾಪಂಡಿತರಲ್ಲಿ ಇವರ ಶಾಸ್ತ್ರ ವ್ಯಾಸಂಗ ಸಾಗಿಬಂದಿತು. ಜೊತೆಗೆ ತೇಜಃಪುಂಜವಾದ ವ್ಯಕ್ತಿತ್ವ. ಪ್ರವಚನದಲ್ಲಿ ಅತ್ಯಂತ ನಿಷ್ಣಾತರೆಂದೂ, ತಪಃಶ್ಶಕ್ತಿಯುಳ್ಳವರೆಂದೂ ಹೆಸರು ಮಾಡಿದ್ದರು. ವಿಷಯ ಮಂಡನೆಯಲ್ಲಿ ಅತ್ಯಂತ ನಿಷ್ಣಾತರೆನಿಸಿದ್ದರು. ಶಾಸ್ತ್ರ ಪಂಕ್ತಿಗಳು ಪುಂಖಾನುಪುಂಖವಾಗಿ ಬರುತ್ತಿದ್ದುವು. ಕೊರ್ಲಹಳ್ಳಿ ಸೇತುರಾಮಾಚಾರ್ಯರು (ಆ ಮುಂದೆ ಶ್ರೀ ಸತ್ಯಧ್ಯಾನರು). ತೋತಾದ್ರಿಮಠದ ಪಂಡಿತರು, ಎಲತ್ತೂರು ಕೃಷ್ಣಾಚಾರ್ಯರು, ಮಾಯಾವರದ ಕೃಷ್ಣಾಚಾರ್ಯರು - ಇವರೇ ಮೊದಲಾದ ವಿದ್ವಾಂಸರು ಶ್ರೀಗಳವರಲ್ಲಿ ವಿಶೇಷ ಆದರಭಾವವನ್ನು ಇರಿಸಿಕೊಂಡಿದ್ದರು.

ಶ್ರೀಗಳವರು ತಮ್ಮ ಸೋದರ ಶ್ರೀಕೃಷ್ಣಾಚಾರ್ಯರಿಗೆ ಆಶ್ರಮವಿತ್ತರು. ಅಂತ್ಯಕಾಲ ಸಮೀಪಿಸಿದಾಗ "ಇಗೋ ಪ್ರಾಣದೇವರು ನಾಭಿಯನ್ನು ಬಿಟ್ಟು ಊರ್ಧ್ವಭಾಗಕ್ಕೆ ಬಂದರು" ಎಂದು ಹೇಳುವಷ್ಟು ಸಾವಿನ ಪ್ರಜ್ಞೆಯುಳ್ಳವರಾಗಿದ್ದರು. ಹರಿನಾಮದ ಪಾರಾಯಣ ಮಾಡುತ್ತ ಇಹಲೋಕವನ್ನು ತ್ಯಜಿಸಿದರು. (ಆಶ್ವಯುಜ ಶುದ್ಧ ದಶಮೀ).

■ ■ ■

## ೫೭

ಸುಕೃತೀಂದ್ರ ಯತಿವರರ ಭಕುತಿಯಲಿ ಭಜಿಸೋ ಪ

ದುಷ್ಕೃತಾದೀ ಬಿಡಿಸಿ ಸುಕೃತ ಫಲ ತಾವಿತ್ತು
ಶ್ರೀಕೃತೀಶನ ಭಜಿಪ ಭಾಗ್ಯ ಕರುಣಿಸುವಂಥ ಅ.ಪ.

ವೇಣುಗೋಪಾಲಾರ್ಯ ಪೂರ್ವದಲಿ ಇವರೆನಿಸಿ
ಸನ್ಯಾಯ ಶಾಸ್ತ್ರವನು ಶಾಮಾರ್ಯರಾದ
ಶ್ರೀ ನ್ಯಾಮಗೊಂಡ್ಲರಲಿ ಸಾನುರಾಗದಿ ಕಲಿತು
ಹನುಮಂತ ಹುಲಿಯರಲಿ ಚತುಃಶಾಸ್ತ್ರ ಕಲೆತಂಥ ೧

ಸುಪ್ರಸಿದ್ಧರ ಕರೆದು ಸುಪ್ರಜ್ಞೇಂದ್ರರಿವರೀಗೆ•
ಸುಪ್ರಸನ್ನತೆಯಿಂದ ವೇದಾಂತ ರಾಜ್ಯ ನೀಡೇ
ಸುಪ್ರಸಾದವ ಬಯಸಿ ಶ್ರೀಮುಷ್ಣ ಶ್ರೀರಂಗ
ಅಪ್ರತಿಮ ಕುಂಭಕೋಣ ದಕ್ಷಿಣ್ಯಾತ್ರೆಯ ಗೈದಾ ೨

ಮುದಮುನಿಯ ಶಾಸ್ತ್ರಗಳ ಮಧುರ ಶೈಲಿಲ್ಲಿ ಪೇಳೆ
ಚದುರ ಶ್ರೀಮುಷ್ಣ ಗೋಪಾಲ ಮಾಯಾವರದಾ
ಬುಧಕೃಷ್ಣ ಎಲತ್ತೂರು ಕೃಷ್ಣರಚ್ಚರಿಗೊಳ್ಳೆ
ಸದನ ನಂಜನಗೂಡ್ಲಿ ಲಕುಮೀಶನ ಧ್ಯಾನಿಪರ ೩



## ೨೪. ಶ್ರೀ ಸುಶೀಲೇಂದ್ರತೀರ್ಥರು

(೧೯೧೨ - ೧೯೨೬)

ಇನ್ನೀಗ ಇಪ್ಪತ್ತನೆಯ ಶತಮಾನದ ಓರ್ವ ಮಹಾನ್ ಕ್ರತುಶಕ್ತಿಯ ಯತಿಗಳ ಪರಿಚಯ ಮಾಡಿಕೊಳ್ಳೋಣ. ಶ್ರೀ ಸುಕೃತೀಂದ್ರರ ಖಾಸಾ ಬಂಧುವಾಗಿ ಪೂರ್ವಾಶ್ರಮದಲ್ಲಿ ಅವರ ಧಾರ್ಮಿಕ - ಲೌಕಿಕ ಕಾರ್ಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಶ್ರೀ ಸುಕೃತೀಂದ್ರರು ತಮ್ಮ ಅನಂತರದಲ್ಲಿ ಪೀಠಕ್ಕೆ ಬರಲು ಇವರೇ ಯೋಗ್ಯರೆಂದು ತೀರ್ಮಾನಿಸಿದ್ದರು. ಅಂತು ಶ್ರೀ ಸುಶೀಲೇಂದ್ರರು ಪೀಠಸ್ಥರಾದ ಮೇಲೆ ಮಠದ ವರ್ಚಸ್ಸು ಬಹಳವಾಗಿ ಬೆಳೆಯಿತು.

ತತ್ತ್ವಮಂಥನದತ್ತ ಶ್ರೀಗಳವರಿಗೆ ವಿಶೇಷ ಒಲವು. ಪಾಂಡಿತ್ಯಕ್ಕೆ ಮನ್ನಣೆ ಸಿಗಬೇಕೆಂಬ ನಿಶ್ಚಲತೆ. ವಿವಿಧ ಕಡೆಗಳಿಂದ ವಿದ್ವಾಂಸರನ್ನು ಬರಮಾಡಿಕೊಳ್ಳಬೇಕು; ವಿದ್ವತ್‌ಗೋಷ್ಠಿಗಳನ್ನು ನಡೆಯಿಸಬೇಕು - ಎಂಬ ಹೊಸ ಯುಗಮಾನಕ್ಕೆ ತಕ್ಕಂತೆ ಯೋಜನೆಗಳನ್ನು ಹಮ್ಮಿಕೊಂಡರು. ತಮ್ಮ ಗುರುಗಳ ಸೂಚನೆಯ ಮೇರೆಗೆ 'ಶ್ರೀಮತ್ಸಮೀರ ಸಮಯ ಸಂವರ್ಧಿನೀ' ಎಂಬ ವೇದಿಕೆಯನ್ನು ನಿರ್ಮಿಸಿ ಮೇಲೆ ಹೇಳಿದಂತೆ ವಿದ್ವತ್ ಕಾರ್ಯಕ್ರಮಗಳನ್ನೂ ನಡೆಯಿಸತೊಡಗಿದರು. ಗುರುಸಾರ್ವಭೌಮರ ಹೆಸರಿನಲ್ಲಿ ಸಂಸ್ಕೃತ ಪಾಠಶಾಲೆಯನ್ನು ವ್ಯವಸ್ಥೆಗೊಳಿಸಿದರು. ಈ 'ಸಂವರ್ಧಿನೀ' ವೇದಿಕೆಯಡಿ ಪ್ರತಿ ವರ್ಷ ಮೂರು - ನಾಲ್ಕು ದಿನಗಳವರೆಗೆ ವಾಕ್ಯಾರ್ಥ ನಡೆಯಬೇಕೆಂಬ ಅವರ ಎಣಿಕೆ ಇಂದಿಗೂ ಕಾರ್ಯರೂಪದಲ್ಲಿದೆ. ಇದರ ಮೊದಲ ಸಭೆಯು ಅವರ ನೇತೃತ್ವದಲ್ಲಿ ನಂಜನಗೂಡಿನಲ್ಲಿ ನಡೆದಾಗ ಪರಮತದ ಪಂಡಿತರೂ ಆಹ್ವಾನಿತರಾಗಿದ್ದರು. ಆ ನಿಮಿತ್ತದಿಂದ ಶ್ರೀಗಳವರು ತೋರಿದ ಔದಾರ್ಯ ಮುಂದಿನವರಿಗೆ ಆದರ್ಶಪ್ರಾಯವೆನಿಸಿತು. ಜೊತೆಗೆ ಮಧ್ವಮತದ ಪಂಡಿತರನ್ನು ಶ್ರೀಮಠದಲ್ಲಿಯೇ ನಿಲ್ಲಿಸಿಕೊಂಡು ಪೋಷಿಸಿದರು. ಶ್ರೀರಾಮದೇವರ ಪೂಜೆಯನ್ನಂತೂ ಅದ್ದೂರಿಯಿಂದ ಮಾಡುತ್ತಿದ್ದರೆಂಬ ಪ್ರತೀತಿ - ಇಂದಿಗೂ ಬಳಕೆಯಲ್ಲಿದೆ.

ಆಗ ಉಡುಪಿಯಲ್ಲಿ ಅದಮಾರು ಮಠದ ಶ್ರೀ ವಿಬುಧಪ್ರಿಯರ ಪರ್ಯಾಯ. ಅವರು ಶ್ರೀ ಸುಶೀಲೇಂದ್ರರಿಗೆ ವಿಶೇಷ ಆಮಂತ್ರಣ ಕಳಿಸಿದರು. ಉಡುಪಿಯ ಹೊರವಲಯದಿಂದಲೇ ಶ್ರೀಗಳಿಗೆ ಸ್ವಾಗತ ನೀಡಲಾಯಿತು. ಮಹತ್ವದ್ದೆಂದರೆ ಶ್ರೀ ಮಧ್ವಾಚಾರ್ಯರಿಂದ ಪ್ರತಿಷ್ಠಿತವಾದ ಕೃಷ್ಣನ ಪ್ರತಿಮೆಯ ಬದಿಯಲ್ಲಿಯೆ ಶ್ರೀರಾಮಚಂದ್ರನ ಪೂಜೆಯನ್ನು ನೆರವೇರಿಸಿದ ದೃಶ್ಯ ಮೈನವಿರೇಳಿಸುವಂತಿತ್ತು. ಈ ಹಿಂದೆ ಇದೇ ಉಡುಪಿಯಲ್ಲಿ ಜರುಗಿದ ಶ್ರೀ ವಾದಿರಾಜರು

ಮತ್ತು ಶ್ರೀ ವಿಜಯೀಂದ್ರರ ಸಮಾಗಮದ ಸಂಭ್ರಮ ಮರುಕಳಿಸಿದಂತಾಗಿತ್ತು. ಉಡುಪಿಯ ರಥಬೀದಿಯಲ್ಲಿ ಶ್ರೀ ವಾದಿರಾಜರು ಒದಗಿಸಿದ್ದ ಜಾಗ ಇತ್ತಲ್ಲವೆ. ಅಲ್ಲಿ ಶ್ರೀ ಸುಶೀಲೇಂದ್ರರು ಶ್ರೀ ರಾಘವೇಂದ್ರರ ಮೃತ್ತಿಕಾ ವೃಂದಾವನವನ್ನು ಪ್ರತಿಷ್ಠಾಪಿಸಿದರು. ಇಂದಿಗೂ ಅಲ್ಲಿ ಅಸಂಖ್ಯ ಭಕ್ತಾದಿಗಳು ದರ್ಶನ ಪಡೆಯುತ್ತಿದ್ದಾರೆ. ಶ್ರೀ ಸುಶೀಲೇಂದ್ರರಿಗೆ ಗುರುಸಾರ್ವಭೌಮರ 'ಚಲಪ್ರತಿಮಾ ಸ್ಥಾಪನೆಯರು' ಎಂಬ ಅಭಿಧಾನ ಸಂದಿದ್ದಿತು.

ಶ್ರೀಗಳು ಅಲ್ಲಿಂದ ಉತ್ತರ ಕರ್ನಾಟಕದ ಸಂಚಾರ ಕೈಕೊಂಡರು. ಶ್ರೀ ಧೀರೇಂದ್ರಯತಿಗಳ ವೃಂದಾವನವಿರುವ ಹೊಸರಿತ್ತಿಯು ಅವರನ್ನು ಆಕರ್ಷಿಸಿತು. ಅಲ್ಲಿ ಇದ್ದಾಗ ಸುಪ್ರಸಿದ್ಧ ಕಾದಂಬರಿಕಾರ ಗಳಗನಾಥರು, ಹತ್ತಿರದಲ್ಲಿದ್ದ ತಮ್ಮ ವೇದಪಾಠ ಶಾಲೆಯ ವಿದ್ಯಾರ್ಥಿಗಳಿಂದ ವೇದದ ಶಾಸ್ತ್ರೋಕ್ತ ಪಠಣ ಮಾಡಿಸಿ, ಶ್ರೀಗಳಿಂದ ಅವರುಗಳಿಗೆ ಬಹುಮಾನ ಕೊಡಿಸಿದ್ದು ಅವರ ಆತ್ಮಚರಿತ್ರೆಯಲ್ಲಿ ದಾಖಲಾಗಿದೆ.

ರಿತ್ತಿಯಲ್ಲಿ ಇದ್ದಾಗಲೇ ದೇಹಾಲಸ್ಯವುಂಟಾಯಿತು. ತಮ್ಮಲ್ಲಿ ದಿವಾನರಾಗಿದ್ದ ಹುಲಿ ಕೃಷ್ಣಾಚಾರ್ಯರಿಗೆ ಆಶ್ರಮವಿತ್ತು ಆಷಾಢಶುದ್ಧ ತೃತೀಯೆಯಂದು ಹರಿಪದವನ್ನು ಸೇರಿದರು. ಅನಂತರ ಶ್ರೀಗಳವರ ಮೃತ್ತಿಕಾ ವೃಂದಾವನವು ಅಲ್ಲಲ್ಲಿ (ಉದಾ:ಗೆ ಬಳ್ಳಾರಿ ಜಿಲ್ಲೆಯ ಅಲ್ಲೀಪುರ) ಸ್ಥಾಪಿತವಾದದ್ದು ಅವರ ಪ್ರತಿಷ್ಠೆಗೆ ಸೂಚಕವಾಗಿದೆ.

ಶ್ರೀ ಸುಶೀಲೇಂದ್ರರ ಕುರಿತು ಹೆಚ್ಚಿನ ಸಂಖ್ಯೆಯಲ್ಲಿ ಹಾಡುಗಳು ರಚಿತವಾಗಿವೆ. ಅವುಗಳಲ್ಲಿ ಐದನ್ನು ಆಯ್ದುಕೊಳ್ಳಲಾಗಿದೆ.



## ೫೭

[ರಾಗ: ತೋಡಿ, ತಾಳ ರೂಪಕ]

ಇಂದು ನೋಡಿದೆ ಸುಶೀಲೇಂದ್ರ ಗುರುಗಳ ಪ

ಕುಂದಣದ ಶಿಖರ ಮೌಕ್ತಿಕದಿಂದ ವಿರಾಜಿಸುವ ರಜತ
ಅಂದಣವ ನೇರಿ ಸಂಭ್ರಮದಿಂದ ಮೆರೆದು ಬರುವ ಗುರುಗಳ ಅ.ಪ.

ಧ್ವಜ ಪತಾಕೆ ಶ್ವೇತಛತ್ರ । ರಜತ ವರ್ಣ ಚವರ ಚಾಮರ
ಭಜಿಪ ಭಟರ ಸಂದಣಿ ಮಧ್ಯ । ರಜನಿ ಪತಿಯ ತೆರದಿ ಶೋಭಿಪರ ೧

ಭೇರಿ ಕಹಳೆ ವಾದ್ಯನೇಕ । ಚಾರುತರ ಶೃಂಗಾರ ವಾದ
ವಾರಣಗಳು ಎಡಬಲದಿ। ಸಾರಿ ಬರುವ ಸಂಭ್ರಮವನು ೨

ಎಲ್ಲಿ ನೋಡೆ ಪಾಠ ಪ್ರವಚನ । ವೆಲ್ಲಿ ನೋಡೆ ವೇದಶಾಸ್ತ್ರ
ಎಲ್ಲಿ ನೋಡಲಲ್ಲಿ ಲಕುಮಿ । ನಲ್ಲನ ಸತ್ಕಥಾಲಾಪ ೩

ಆ ಮಹಾ ಸುಶೋಭ ಮಾದ । ಹೇಮ ಮಂಟಪ ಮಧ್ಯ ಮೂಲ
ರಾಮಾರ್ಚನೆಗೈವ ಅಂದ । ಪ್ರೇಮದಿ ನೋಡಿ ಧನ್ಯನಾದೆ ೪

ಈ ಮಹಾಗುರುವರ್ಯರ ಪದ । ತಾಮರಸವ ಪೊಂದಿದ ಭಕ್ತರ
ನೇಮದಿಂ ವರದೇಶವಿಠ್ಠಲ । ಕಾಮಿತಾರ್ಥಗರೆವ ಸತ್ಯ ೫

■ ■ ■

## ೫೮

[ರಾಗ: ನಾಟಿ, ತಾಳ ಆದಿ]

ಸುಶೀಲೇಂದ್ರ ಸುಶೀಲೇಂದ್ರ ಪ

ಪುಶಿಯ ವಾದಿ ಕರಿವೃಂದ ಮೃಗೇಂದ್ರ ಅ.ಪ.

ಅಮರರ ಗೋಸಮ ಸುಕೃತೀಂದ್ರರ ಕರ । ಪ-
ದುಮ ಜಾತ ಗುರು ಪದ್ಮನಾಭಪ್ರಿಯ ೧

ಮುದ್ದು ಮಧ್ವಾರ್ಯರ ಶುದ್ಧ ಮತಾಬ್ಧಿಯೊಳ್
ಉದ್ಭವಿಸಿದ ಶಶಿ ಉದ್ಧರಿಸೋ ಎನ್ನ ೨

ಪಂಡಿತರೆಂಬ ಧೇನು ಹಿಂಡು ಕಾಯ್ದು ಭೂ
ಮಂಡಲ ಚರಿಸಿದ ಪಂಡಿತ ಶಿರೋರತ್ನ ೩

ಹೇಮ ಮಂಟಪವನ್ನು ಪ್ರೇಮದಿ ಮಾಡಿ ಮೂಲ
ರಾಮನ ದಿವ್ಯಪದ ತಾಮರಸ ಪೂಜಿಸಿದ ೪

ಅಷ್ಟ ಯತಿಗಳ ಇಷ್ಟದಿ ಉಡುಪಿಗೆ
ಶ್ರೇಷ್ಠ ತರದಿ ಪೋಗಿ ಕೃಷ್ಣನ ಭಜಿಸಿದ ೫

ಮೇದಿನಿ ಸುರರಿಗೆ ಭೇದ ಬಾಣ ಪೇಳಿ
ವೇದ ದಶಾಬ್ದದಿ ವೇದಾಂತ ರಾಜ್ಯವಾಳ್ದ ೬

ಹುಲಿ ಕೃಷ್ಣಾರ್ಯರಿಗೊಲಿದು ಆಶ್ರಯವಿತ್ತು
ಮೂಲ ರಾಮನ ಪಾಡಿ ಬಾಳೆಂದೆ ಜಗದೊಳು ೭

ವಾಸುಕಿಶಯನನ ಲೇಸಾಗಿ ಭಜಿಸುತ
ಕಾಶಿ ಸಮ ರಿತ್ತಿವಾಸ ಕರ್ಮಂದೀಂದ್ರ ೮

ವರದಾ ತೀರದಿ ಮೆರೆವ ಧೀರೇಂದ್ರರ
ಚರಣಾರಾಧಕ ಪರಿಪಾಲಿಸೋ ಎನ್ನ ೯

ಜ್ಞಾನದ ಬೆಳಕನ್ನು ಸಾನುರಾಗದಿ ತೋರಿ
ಮಾನವ ಸಿಂಗನ ಧ್ಯಾನವನೀಯೋ ೧೦

ಲಕುಮೀಶ ದೇವನ ಭಕುತಿ ಪಾಶದಿ ಕಟ್ಟಿ
ಸುಖಪಡುವೋ ದಿವ್ಯ ಮುಕುತಿ ಪಥವ ತೋರಿ ೧೧

■ ■ ■

## ೫೯

[ರಾಗ: ಪೂರಿಯಾ, ತಾಳ ದಾದರಾ]

**ಯತಿದ್ವಯರನೆ ಸ್ಮರಿಸೋ। ಪ್ರತಿದಿನ** ಪ
ಸತತ ಭಕ್ತಿ ಜ್ಞಾನ ಪ್ರಾರ್ಥಿಪರಿಗುಣಿಸುತ

ವಾತನೊಲಿಮೆಲಿ ಮುಕುತಿ ಪ್ರದಾತರೆನಿಸಿದ ಅ.ಪ.
ಗುರು ಸುಕೃತೀಂದ್ರರ । ಕರಜರೆಂದೆನಿಸಿದ

ಗುರು ಸುಶೀಲೇಂದ್ರರ । ಪರಮ ಭಕ್ತಿಯ ಬೇಡಿ ೧
ವರದೇಂದ್ರ ತೀರ್ಥರ । ವರಪುತ್ರರೆನಿಸಿದ

ಗುರು ಧೀರೇಂದ್ರರ । ಗುರುತರ ಜ್ಞಾನಕೆ ೨
ಧೀರವಿಠ್ಠಲ ಪ್ರಿಯ । ಗುರು ರಾಘವೇಂದ್ರರ

ಕರುಣ ಪಡೆದು । ಪುರ ರಿತ್ತಿಲಿ ನೆಲಸಿಹ ೩

■ ■ ■

## ೬೦

[ರಾಗ: ಭೂಪ, ತಾಳ - ತ್ರಿಶಾಲ]

ವರದಾ ತೀರದಿ ನೆಲಸಿಹ ಗುರುವರನ್ಯಾರೆ। ಪೇಳಮ್ಮಯ್ಯಾ ಪ.
ವರದಾಯಕ ಶ್ರೀ ರಾಘವೇಂದ್ರರ ಕರುಣ ಪಡೆದ ಸುಶೀಲೇಂದ್ರ
- ಮುನಿಪನೆ ಅಪ

ದರಪೋಲುವ ಕಂಧರದಿ ತುಲಸಿ ಮಣಿಹಾರಾ। ಪೇಳಮ್ಮಯ್ಯಾ
ಅರಶಶಿಸಮ ಸುವಿಶಾಲ ಫಾಲದಲಿ ತಿಲಕಾ। ಪೇಳಮ್ಮಯ್ಯಾ
ಸುರಚಿರ ದ್ವಾದಶನಾಮ ಊರ್ಧ್ವ ಪುಂಡ್ರಗಳು । ಪೇಳಮ್ಮಯ್ಯಾ
ಧರಿಸಿ ಧರಣಿಯೊಳು ಪರಿಪರಿ ವಿಭವದಿ
ಮೆರೆದ ಕರುಣಿವರ ಪುಣ್ಯ ಪುರುಷನೆ ೧

ತನುಮನಧನ ವಸಿತಾದಿ ವಿಷಯವಿರಹಿತನು। ಪೇಳಮ್ಮಯ್ಯಾ
ಅತುಳ ಮಹಿಮ ಸುಕೃತೀಂದ್ರತೀರ್ಥರಿಗೆ ಪುತ್ರ। ಪೇಳಮ್ಮಯ್ಯಾ
ಕ್ಷಿತಿಸುರನುತ ಸುವ್ರತೀಂದ್ರ ಹೃದಯ ಶತಪತ್ರ । ಪೇಳಮ್ಮಯ್ಯಾ
ಸತತ ರವಿಯೆನಿಸಿ ಶ್ಯಾಮಸುಂದರನ
ಅತಿಶಯ ಭಕುತಿಲಿ ಸ್ತುತಿಪ ಸುಗುಣ ನಿಧಿ ೩

■ ■ ■

## ೬೧

[ರಾಗ: ರೇಗುಪ್ತಿ, ಝಂಪೆತಾಳ]

**ವಶವಲ್ಲ ವರ್ಣಿಸಲು ಸುಶಿಲೇಂದ್ರ (ತೀರಥರ)**
ಅಸದೃಶದ ಮಹಿಮೆಗಳನು ಪ

ಬಿಸಿಜ ಸಖ ಕಿರಣ ತೆರ ವಸುಧಿತಳದೊಳು ಇವರ
ಸುಶಿತ ಸತ್ಕೀರುತಿಯು ಪಸರಿಸಿರುವುದು ಘನ್ನ ಅಪ

ಭಾವ ಭಕುತಿಲಿ ಯಿವರ ಶೇವಿಸುವ ನರರಿಗೆ
ಆವಾವ ಭಯವಿಲ್ಲವೊ
ಗೋವತ್ಸನ್ಯಾಯದಲಿ ತಾವೆ ಬೆಂಬಲರಾಗಿ
ಭೂವರಜನದಿ ವಾಸ ಈವರಿವರಿಗೆ ಜಯವು ೧

ಈ ಯತಿಯ ವಲಿಮೆಯೇ ರಾಯರೊಲಿಮೆಯ ಕೇಳು
ರಾಯರೊಲಿಯಲು ಗುರುವಾಯುವಲಿವ
ವಾಯು ವಲಿದಾ ಮಾತ್ರ ಕಾಯಜನ ಜನಕ ಯಮ
ರಾಯನಂಜಿಕೆ ಬಿಡಿಸಿ ಕಾಯುವನು ಪ್ರತಿ ದಿವಸ ೨

ಭಕುತಿಪೂರ್ವಕವಾಗಿ ಸಕಲ ಕ್ಷೇತ್ರವ ಚರಿಸಿ
ನಿಖಿಳ ಭೂದೇವಗಣಕೆ
ವಿಖಿನಸಾರ್ಚಿತ ಮೂಲ ಲಕುಮೀಶ ದರುಶನದ
ಸುಖವಿತ್ತು ಪಾಲಿಸಿದ ಅಕಳಂಕ ಮಹಿಮರ ೩

ಸು ಯನಲು ಸುಜ್ಞಾನ ಶೀಯನಲು ಶೀಲತ್ವ
ಲ ಯನಲು ಲಯ ದೂರವೋ
ಕಾಯ ಶುದ್ಧಿಯಲಿ ಇಂದ್ರ ಎಂದುಚ್ಚರಿಸಲಾ
ಇಂದ್ರಲೋಕ ಸುಖವೋ ನಿಜವೋ ೪

ವೃಂದಾರಕಾಂಶಜರು ಸಂದೇಹವಿಲ್ಲಿವರ
ವೃಂದಾವನ ದರುಶನದಿ
ಮಂದಾಕಿನಿಯೊಳಗೆ ಮಿಂದ ಫಲ ಸಂಪ್ರಾಪ್ತಿ
ಇಂದಿರಾಪತಿ ಶ್ಯಾಮಸುಂದರನು ಕೈಪಿಡಿವ ೫



# ೫. ಶ್ರೀ ಸುವ್ರತೀಂದ್ರತೀರ್ಥರು

( ೧೯೨೬-೧೯೩೩ )

ಕೇವಲ ಕೆಲವೇ ವರ್ಷಗಳಲ್ಲಿ ಅವ್ಯಾಹತವಾಗಿ ಕಾರ್ಯಪ್ರವೃತ್ತರಾಗಿ ಹೆಸರು ಮಾಡಿದ ಸ್ವಾಮಿಗಳೆಂದರೆ ಶ್ರೀ ಸುವ್ರತೀಂದ್ರರು. ಹಿಂದಿನ ಸ್ವಾಮಿಗಳಿಗೆ ಪಾಠ ಹೇಳಿದ ಹುಲಿ ಹನುಮಂತಾಚಾರ್ಯರ ಮಕ್ಕಳಿವರು. ( ಶ್ರೀಕೃಷ್ಣಾಚಾರ್ಯ ಎಂದವರ ಹೆಸರು ) ಅದೇ ಕಾರಣದಿಂದ ಇವರ ಪಾಂಡಿತ್ಯವನ್ನು ಗುರುತಿಸಿ ಶ್ರೀ ಸುಶೀಲೇಂದ್ರರು ಇವರನ್ನು ಪೀಠಸ್ಥರನ್ನಾಗಿ ಮಾಡಿದರು. ತಂದೆಯಿಂದ ಶಾಸ್ತ್ರಾಭ್ಯಾಸ ಮಾಡಿದ್ದಲ್ಲದೆ, ತಿರುಪತಿಗೆ ಹೋಗಿ, ಅಲ್ಲಿಯ ಕಪಿಸ್ಥಳಂ ದೇಶಿಕಾಚಾರ್ಯರಲ್ಲಿ ನ್ಯಾಯಶಾಸ್ತ್ರವನ್ನು ಕಲಿತು ಬಂದರು. ಶ್ರೀ ಸುಶೀಲೇಂದ್ರರು ಮಾಡಿದ ಕಾರ್ಯವನ್ನು ಇದೀಗ ಗಮನಿಸಿದ್ದೇವೆ. ಅದರ ಯಶಸ್ಸಿಗೆ ಶ್ರೀ ಕೃಷ್ಣಾಚಾರ್ಯರ ಅನನ್ಯಿತ ಸಹಾಯವೂ ಕಾರಣವಾಯ್ತು. ಇವರಿಗೆ ಆಶ್ರಮ ಕೊಡಬೇಕೆಂದಾಗ, "ಆ ಯೋಗ್ಯತೆ ತಮಗಿಲ್ಲವೆಂದು ಹೇಳುವಷ್ಟು ವಿನಮ್ರ ಸ್ವಭಾವದವರು.

ಶ್ರೀಗಳವರು ಸಂಚಾರಪ್ರಿಯರು; ನಿಜವಾದ ಪರಿವ್ರಾಜಕರು, ಮುಳಬಾಗಿಲಿಗೆ ಬಂದಾಗ ತಮ್ಮ ಗುರುಗಳ ಮೊದಲ ಮಹಾಸಮಾರಾಧನೆಯನ್ನು ನೆರವೇರಿಸಿದರು. ದಿವಾನರಾಗಿದ್ದ ಶ್ರೀನಿವಾಸ ಮೂರ್ತ್ಯಾಚಾರ್ಯರದೇ ವ್ಯವಸ್ಥೆ. ಅಲ್ಲಿಂದ ಶ್ರೀರಂಗಮ್, ಕುಂಭಕೋಣಮ್. ಇಲ್ಲಿ ನಡೆದ, 'ಸಮೀರ ಸಮಯ ಸಂವರ್ಧಿನೀ' ಸಭೆಯನ್ನು ಹಿಂದಿಗಿಂತಲೂ ಹೆಚ್ಚು ಅರ್ಥಪೂರ್ಣವಾಗಿ - ಎಂದರೆ ಅನೇಕ ಜನ ಪಂಡಿತರನ್ನು ಬರಮಾಡಿಕೊಂಡು ವೈಭವೋಪೇತವಾಗಿ ಜರುಗಿಸಿದರು. ಹಾಗೆ ಬಂದವರಲ್ಲಿ ಕೂಡಲಿ ಶೃಂಗೇರಿ ಮಠದ ಸ್ವಾಮಿಗಳಾಗಲಿದ್ದ ಶ್ರೀ ವಿರೂಪಾಕ್ಷ ಶಾಸ್ತ್ರಿಗಳು, ವೈದ್ಯನಾಥ ಶಾಸ್ತ್ರಿಗಳು ಅಭಿನವಭಟ್ಟ ಬಾಣನೆಂಬ ಬಿರುದುಳ್ಳ ಆರ್. ವಿ. ಕೃಷ್ಣಮಾಚಾರ್ಯರು ಪ್ರಮುಖರೆನ್ನಬೇಕು. ಸಭೆಯಲ್ಲಿ ಶ್ರೀಗಳವರು ಮಾಡಿದ ಅನುವಾದವನ್ನು ಮೆಚ್ಚಿಕೊಂಡು, ಅವರ ಗುರುಗಳೇ ಆಗಿದ್ದ ದೇಶಿಕಾಚಾರ್ಯರು.

"ಸಾರೋದ್ಧಾರ ನಯನ ಸಾರಭುವಾ ಸಂಗೃಹ್ಯ ಸಂಮೋದತಃ

ಸ್ವಷ್ಟೋಽಯಾ ಜಗತೀತಮೇ ವಿಜಯತೇ ಶ್ರೀ ಸುವ್ರತೀಂದ್ರೋ ಗುರುಃ"

ಎಂಬುದಾಗಿ ವರ್ಣಿಸಿದ್ದಾರೆ.

ಆ ಮುಂದೆ ಶ್ರೀಗಳವರು ಔತ್ತರೇಯ ಕರ್ನಾಟಕಕ್ಕೆ ಬಂದು ವೇಣೀಸೋಮಪುರ, ಗದ್ವಾಲ, ಮಾನವಿ ಮುಂತಾದ ದಾಸಸಾಹಿತ್ಯದ ನೆಲೆಗಳನ್ನು ಸಂದರ್ಶಿಸಿ, ಮಂತ್ರಾಲಯಕ್ಕೆ

ಬಂದರು. ಆಕಸ್ಮಿಕವಾಗಿ ಒದಗಿ ಬಂತು ದೇಹಾಸಲ್ಯ. ಹಣ್ಣು ವಯಸ್ಸೇನೂ ಅಲ್ಲ; ಶ್ರೀನಿವಾಸ ಮೂರ್ತ್ಯಾಚಾರ್ಯರಿಗೆ ದೀಕ್ಷೆಯಿತ್ತು ಅಸ್ತಂಗತರಾದರು (ವೈಶಾಖ ಶುದ್ಧ ಏಕಾದಶಿ).

■ ■ ■

## ೬೨

**ನಮಿಸುವೆನು ಸುವ್ರತೀಂದ್ರಯತಿಗಳಿಗೆ ಸತತ** ಪ

ಭ್ರಮಿಸಿ ತ್ರಯ ಮೋಹದಲಿ ಶ್ರಮಿಸಿ ಶ್ರೀಹರಿಪದವ
ನಮಿಸಿ ನಾ ತುತಿಸದಲೆ ಕೆಟ್ಟೆ ಕೈಪಿಡಿ ಎಂದು ಅ.ಪ.

ಹುಲಿ ಹನುಮಂತರ ಚಲ್ವ ಭವರಿವರಲ್ಲಿ
ಸಲ್ಲಲಿತ ವೇದಾಂತ ನ್ಯಾಯಶಾಸ್ತ್ರವ ಕಲಿತು
ಕಲಿತನದಿ ತಿರುಪತಿಲಿ ಪ್ರೌಢಾಧ್ಯಾಪಕರಾಗಿ
ಇಳೆಯೊಳಗೆ ಬಹು ಕೀರ್ತಿ ಪಡೆದಂಥ ಮಹಿಮರಿಗೆ ೧

ಒಲುಮೆ ಗಳಿಸಿ ಶ್ರೀ ಸುಶೀಲೇಂದ್ರಯತಿಗಳಲಿ
ಹುಲಿ ಕೃಷ್ಣರಿವರೀಗೆ ಒಲಿದಾಶ್ರಮವ ನೀಡೆ
ಬಲಗೊಂಡು ಶ್ರೀಮೂಲರಾಮಾದಿ ಪೂಜೆಯಲಿ
ನಲಿದು ದಕ್ಷಿಣ ಯಾತ್ರೆ ಹರುಷದಲಿ ಗೈದರಿಗೆ ೨

ಶ್ರೀ ಕುಂಭಕೋಣದಲಿ ಮಹಾಸಮಾರಾಧನೆಗೆ
ಜೋಕೆಯಲಿ ಸಮೀರಸಮಯಸಭದೀ
ಆ ಕೃಷ್ಣ ಎಲತ್ತೂರು ಕಪಿಸ್ಥಳಂ ದೇಶಿಕಾರ್ಯ
ಚಕ್ರವರ್ತಿ ಅಯ್ಯಂಗಾರ್‍ರಿವರ ಬರಮಾಡ್ವರಿಗೆ ೩

ಕೂಡಲ ಶೃಂಗೇರಿ ಮಠದ ಸ್ವಾಮಿಯವರು
ಸಡಗರದಿ ಬಂದ ಅಭಿನವ ಭಟ್ಟಾರ್ಯರು
ದೊಡ್ಡಬಳ್ಳಾಪುರದ ವಾಸುದೇವಾಚಾರ್ಯರು
ಬಿಡದೆ ವಿರುಪಾಕ್ಷ ಕೋವಿದರ್ಕರ್ಸಿದರಿಗೆ ೪

ವೈದ್ಯನಾಥಶಾಸ್ತ್ರಿ ತಿರುವಾದಿ ವಿಜಯೀಂದ್ರ
ಮುದದಿಂದ ಬಂದ ಕೋವಿದ ಕೃಷ್ಣಮೂರ್ತಿ
ಒದಗೆ ವಾಕ್ಯಾರ್ಥ ಪಶೂನಾಂ ಯಜೇತಕ್ಕೆ
ತುದಿ ನಿರ್ಣಯ ನೀಡಿ ಗೆದ್ದಂಥ ಯತಿಗಳಿಗೆ ೬

ದೇಶಿಕಾರ್ಯರು ಇವರ ಭಾಸುರ ವಿದ್ವತ್ತಿಗೆ
ಸೋಶಿಲಾಕ್ಷಣದಲ್ಲಿ ಕವನವನು ನೀಡೇ
ತೋಷದಲಿ ಪೂಜೆಗೈದು ವಿಜಯೀಂದ್ರರಡಿಗಿಟ್ಟು
ರಾಶಿ ಧನಕನಕಾದಿಗಳ ಪಂಡಿತರಿಗಿತ್ತಂಥ ೭

ವ್ಯಾಸತತ್ವಜ್ಞರ ದರ್ಶನಾದಿ ಗೈದು
ಸಂಸ್ಥಾನ ಗದ್ವಾಲ್ದಿ ಚಾತುರ್ಮಾಸ ಕುಳಿತೂ
ಹಾಸದಲಿ ಆಶ್ರಮದ ಸುಯಮೀಂದ್ರರಿಗೆ ಯಿತ್ತು
ವಾಸ ಮಂತ್ರಾಲಯದಿ ಲಕುಮೀಶ್ನ ಧ್ಯಾನಿಪರ ೮



# ೨೬. ಶ್ರೀ ಸುಯಮೀಂದ್ರತೀರ್ಥರು

( ೧೯೩೩-೧೯೬೭ )

ಶ್ರೀ ಸುಯಮೀಂದ್ರರಿಗೆ ರಾಘವೇಂದ್ರ ಗುರುಸಾರ್ವಭೌಮರಲ್ಲಿ ಅನನ್ಯಿತವಾದ ಭಕ್ತಿ. ಪ್ರತಿಕ್ಷಣವೂ ಅವರನ್ನು ನೆನೆಯುತ್ತಿದ್ದರು ಎಂದೆನಿಸುವಷ್ಟು. ಹಾಗಾಗಿ ಮಂತ್ರಾಲಯದಲ್ಲಿಯೇ ಹೆಚ್ಚು ವರ್ಷಗಳನ್ನು ಕಳೆದರು. ಅದಕ್ಕೆ ಇನ್ನೊಂದು ನಿಮಿತ್ತವಿದ್ದಿತು. ಕಳೆದ ಶತಮಾನದ ಮಧ್ಯದಿಂದ ಶ್ರೀ ರಾಘವೇಂದ್ರರ ದರ್ಶನಕ್ಕೆ ಬರುವವರ ಸಂಖ್ಯೆ ಭರದಿಂದ ಹೆಚ್ಚಾಗುತ್ತ ನಡೆದಿದ್ದಿತು. ಅವರಿಗಾಗಿ ವಸತಿ, ಭೋಜನ ಶಾಲೆಗಳು ಹಾಗೂ ಇತರ ಅನುಕೂಲತೆಗಳನ್ನು ಒದಗಿಸುವತ್ತ ಗಮನವಿತ್ತರು. ಸ್ಥಳದೇವತೆ ಮಂಚಾಲೆಮ್ಮನ ಪೂಜೆಗೆ ವಿಶೇಷ ಮಹತ್ವವಿತ್ತರು. ಇತ್ತ ಶ್ರೀರಾಯರ ಪೂಜಾರಾಧನೆಯು ಸುಗಮವಾಗಿ ನಡೆದು ಸಹಸ್ರಾರು ಜನ ಏಕ ಕಾಲಕ್ಕೆ ನೋಡಿ ಆನಂದಿಸುವಂತೆ ವ್ಯವಸ್ಥೆ ಮಾಡಿದರು. ವಿದ್ಯುದ್ದೀಪ, ಧ್ವನಿವರ್ಧಕಗಳು ಅಣಿಗೊಳಿಸಲ್ಪಟ್ಟವು. ಇಂಥ ಪ್ರತಿಯೊಂದು ಸೌಲಭ್ಯದತ್ತ ಗಮನ ಕೊಟ್ಟಿದ್ದರ ಪರಿಣಾಮವಾಗಿ ಮಂತ್ರಾಲಯವು ದೇಶದಲ್ಲೇ ಮಹಾನ್ ಯಾತ್ರಾಸ್ಥಳವಾಗಿ ಪರಿಣಮಿಸಿತು. ಅದರ ಗುರಿ ಒಂದೇ. ಅಗಮ್ಯ ಮಹಿಮಾನ್ವಿತರಾದ ಗುರುಸಾರ್ವಭೌಮರ ಕೃಪೆಗೆ ಪಾತ್ರರಾಗಿ ಜನ ಧನ್ಯರಾಗಬೇಕೆಂಬುದು. ಹಾಗೆ ಯಾತ್ರಾರ್ಥಿಯಾಗಿ ಮೈಸೂರಿನ ಶ್ರೀ ಜಯಚಾಮರಾಜರೂ ಬಂದು ಹೋದದ್ದನ್ನು ಪ್ರಾಸಂಗಿಕವಾಗಿ ಇಲ್ಲಿ ಕಾಣಿಸಬಹುದು.

ಜ್ಞಾನ ಪ್ರಸರಣಕ್ಕೆ ಸಲ್ಲಿಸಿದ ಅವರ ಕಾಣ್ಕೆಯು ಅಷ್ಟೇ ಮಿಗಿಲಾದದ್ದು. ಶ್ರೀ ಸುಶಿಲೇಂದ್ರರು ಆರಂಭಿಸಿದ್ದನ್ನು "ಗುರುಸಾರ್ವಭೌಮ ಸಂಸ್ಕೃತ ಕಾಲೇಜ್" ಎಂದು ಪರಿವರ್ತಿಸಿ ಹೆಚ್ಚೆಚ್ಚು ವಿದ್ಯಾರ್ಥಿಗಳು ಬರುವಂತೆ ಅನುಕೂಲತೆಗಳನ್ನು ಒದಗಿಸಿದರು. ಸಮೀರ ಸಮಯ ಸಂವರ್ಧಿನೀ ಸಭೆಗಳನ್ನು ವರ್ಷದಲ್ಲಿ ಎರಡೆರಡು ಬಾರಿ ನೆರವೇರಿಸಿ ಪಂಡಿತರನ್ನು ಬರಮಾಡಿಕೊಂಡು ಸನ್ಮಾನಿಸುತ್ತಿದ್ದರು. ವಿಶೇಷವೆಂದರೆ ಗ್ರಂಥಗಳ ಪ್ರಕಟನೆ. 'ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರ'ದ ಮೂಲಕ, ತದನುಗುಣವಾದ ಸಂಶೋಧನ ಹಾಗೂ ಪ್ರಕಟನ ಕಾರ್ಯವನ್ನು ಕೈಕೊಂಡರು. ಅದರಿಂದ 'ಮಂತ್ರಾಲಯದ ಮಹಾನ್ ಶಿಲ್ಪಿ' ಎಂಬ ಅನ್ವರ್ಥಕ ಹೆಗ್ಗಳಿಕೆ ಅವರದಾಯಿತು.

ಕ್ರಿ.ಶ. ೧೯೬೩ರಲ್ಲಿ ಅವರ ದೇಹಸ್ಥಿತಿ ಉಲ್ಬಣಿಸಿತು. ಕೂಡಲೇ ತಮ್ಮ ಕಕ್ಕನ ಮಗ ಶ್ರೀ ವೆಂಕಟರಾಘವೇಂದ್ರರಿಗೆ ಆಶ್ರಮವಿತ್ತರು. ಆ ಮುಂದೆಯೂ ನಾಲ್ಕು ವರ್ಷ ಬದುಕಿದ್ದು ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಸೇವೆಯನ್ನು ಮುಂದುವರಿಸಿ, ಪುಷ್ಯ ಶುದ್ಧ ದ್ವಿತೀಯೆಯಂದು ಹರಿಪದವನ್ನು ಸೇರಿದರು.

## ೭೩

[ರಾಗ: ಕಾಂಬೋಧಿ, ಝಂಪೆ ತಾಳ]

**ಶ್ರೀ ಸುಯಮೀಂದ್ರರ ಚರಣ ಕಮಲ ಭಜಿಸೋ -**
**ಗುರುಕರುಣವ ಗಳಿಸೋ** ಪ
ಶ್ರೀ ಸಮೀರಮತ ಶರನಿಧಿ ಗುರುರಾಜಾ -
ಆಶ್ರಿತ ಸುರಭೂಜಾ ಅ.ಪ.

ಮುನಿ ಮಧ್ವಾರ್ಯರ ಘನತರ ಪೀಠದಲಿ - ರಾರಾಜಿಪರಿಲ್ಲಿ
ಕನಕಾಂಬಕವೈರಿಯ ಸುತೆ ತೀರದಲಿ - ಇಪ್ಪರು ಮುದದಲ್ಲಿ
ಜನಕಜಾತಪತಿ ಮೂಲರಾಮ ಪದವ ವಿಭದವಲರ್ಚಿಸುವ
ಮುನಿ ರಾಘವೇಂದ್ರರ ಪದಕಂಜಭೃಂಗ - ನತಜನ ದಯಾಪಾಂಗ ೧

ಗುರು ಸುವ್ರತೀಂದ್ರರ ಕರಸರಸಿಜ ಜಾತಾ - ಜಗದೊಳಗೆ ಪ್ರಖ್ಯಾತಾ
ಪರವೋದಾರ್ಯದಿ ರವಿಜನ ಮರೆಸಿದನ - ಧರೆಸುರ ಪಾಲಕನ
ಕರಜಾನನ ಮಣಿ ತುಲಸಿ ಸುಸರ ಭೂಷಾ - ಕಾಷಾಯವಾಸಾ
ಹರಿಮತ ಸಿಂಧುವ ಮೆರೆಸುತ ಸಂಚರಿಪ - ಜನರುದ್ಧರಿಪ ೨

ಪರಿಮಳಾಚಾರ್ಯರ ಪರಿಮಳ ಸೌರಭವ - ಹರಹಿದ ಜಿತಕಾಮ
ಶರವತ್ಸರದಿಂ ಧರ್ಮ ಸುಸಾಮ್ರಾಜ್ಯ - ಪಾಲಿಪ ಧ್ವಜಪೂಜ್ಯ
ಶರಣಜನಾಮಯ ತಿಮಿರಕೆ ಮಾರ್ತಾಂಡ - ಧೃತ ಕಲಶ ಸುದಂಡಾ
ಕರಿವರದನಭಿನವಪ್ರಾಣೇಶವಿಠಲನಾ - ಸದ್ಭಕ್ತವರೇಣ್ಯಾ ೩

■ ■ ■

## ೭೪

(ವಾರ್ಧಿಕ)

ಉಡುರಾಜ ಮುಖಿಯೇ ಕೇಳ್ ಮೃಡವೈರಿಶರ ಗೆಲಿದ
ದೃಢಭಕ್ತ ಗುರುರಾಜ ಪದಕಮಲ ವಾರಿಜೆಯ
ಒಡನೆ ಪರಿಮಳವಿದು ಮೂಲರಾಮನ ಸೇವೆ ಬಿಡದರ್ಚನೆಯ ಮಾಡುವ

ಕಡು ತಪೋವೈ .... ಜ್ಞಾನ ನಿಜ ಭಕುತಿಯನು
ಪಡೆದು ಈರೆರಡುಧಿಕ ವಿಂಶತಿಯ ವತ್ಸರದಿ
ಪೊಡವಿಸುರರನು ಪೊರೆದು ಆಳ್ವೆ ನಿಜ ಪಟ್ಟವನು
ಸುಯಾಮೀಂದ್ರಗುರುವರ್ಯ ಭೋ ೧

ನ್ಯಾಸಿಯೋ ಸನ್ಯಾಸಿ ಜ್ಞಾನದಾ ರಾಶಿಯೋ
ಶಿಯೋ ಹರಿಯ ಪದ ಭೂಷಿಯೋ ಸುಗುಣವಾ
ರಾಶಿಯೊ, ಧೃತಕಮಂಡಲು ಊರ್ಧ್ವಪುಂಡ್ರಧರ ಕಾಷಾಯವಾಸಿಯೊ ನಿಜ
ತೋಷಿಯೋ ಭಕ್ತರಘನಾಶಿಯೋ ಹಗೃತ್ಕಮಲ
ವಾಸಿಯೋ ಬಿಂಬಿನೋ ಪಾಸಿಯೋ ಗುರುಗಣದ
ಧ್ಯಾಸಿಯೋ ಮಧ್ವಮತ ಪೋಷಿಯೋ ವಿದ್ವತ್ತು
ಕೋಶಿಯೋ ಗುರುವರೇಣ್ಯ ೨

ಕಾಲನಾಮಕ ಹರಿಯು ಷಷ್ಟ್ಯಬ್ದರೂಪಿ ಮಾ
ಲೋಲರಮೆ ಈರನಿಂ ಪನ್ನೆರಡು ಯುಗನಾಗಿ
ಶೀಲಸುಯಮೀಂದ್ರರನು ಪಾಲಿಸಿದ ಜಾಲಿನ್ನು ಷೋಡಸ್ತೋರ ಶತಾಬ್ದ
ಮೇಲಾಯುದಾನವಂ ಗೈದು ನಿಜ ಶಿಷ್ಯರನು
ಪಾಲಿಸಲಿ ಕಲಿಮಲ ದೂರಗೈಸುತ ನಿತ್ಯ
ಕೋಲಜನಿಕೂಲ ಮಂತ್ರಾಲಯ ಪ್ರಭುವರ್ಯ ರಾಳಿಸಲಿ ಸಾಮ್ರಾಜ್ಯವ ೩
ಪಂಚರೂಪಿ ಹರಿಯು ನಿತ್ಯ ನಲಿದಾಡುತಲಿ
ಅಂಚೆವಹ ಸಾನಂದ ತೀರ್ಥಾದಿ ಮುನಿವರರು
ವಾಂಛಿತದ ಫಲವೀವ ಗುರುಸಾರ್ವಭೌಮರಲಿ ವಂಚನಿಲ್ಲದೆ ಇರುತಲಿ
ಸಂಚಿತಾಗಾಮಿಗಳ ನೂಕಿ ಸದ್ಭಕ್ತರಿಗೆ
ಪಂಚ ಪ್ರಾಜ್ಞನ ತೋರ್ಪ ಗುರುರಾಜರೊಲುಮಿಯನು
ಹಂಚಿಕಿಂದಲಿ ಪಡೆದ ಕಿಂಚನರು ಸುಯಮೀಂದ್ರ
ಗುರುವರ್ಯರೆಸರಿ ನೋಡಿ ೪

ಚಂದ್ರಷೋಡಶ ಕಳೆದಿ ಅಂಬರದಿ ನಿಂದು ಸುಯ -
ಮೀಂದ್ರ ಗುಣರೂಪ ನೋಡುತ ನಾಚಿ ಅಣುವಾದ

ಇಂದ್ರಗುರು ತಮ್ಮ ಗುರುತ್ವದ ಮಹಿಮೆ ಕಂಡು ಸ್ವರ್ಗದಿವಾಸ ಮಾಡ್ದಶೇಷ
ಸಾಂದ್ರದಿಂ ಸಾಮ್ರಾಜ್ಯವಾಳ್ವದನು ವೀಕ್ಷಿಸುತ
ನಿಂದ್ರದಲೆ ಕ್ಷೋಣಿತಳ ಸಾರ್ದನಿನ್ನೇನು ಅಮ -
ರೇಂದ್ರ ಗುರುರಾಜವಿಭವೋತ್ಸವ ವಧಿಕವಾಗೆ ತಲವಾಗಿ ದಿವಿಗೆ ಪೋದ ೫

ಯತಿವರ್ಯ ವಿಶ್ವೇಶ ತೀರ್ಥರಾಹ್ವಾನಿಸಲು
ಅತಿ ಮೋದದಿಂ ತ್ವರಿತ ಮಧ್ವಮಹಮಂಡಲದ
ಕೃತುಪುರಕೆ ದಿಗ್ವಿಜಯಗೈದು ವಿದ್ಯಾಮಾನ್ಯ ಯತಿಗಳಿಂ ಸಂಭ್ರಮದಲಿ
ನತಿಸಿ ನತಿಸುತ್ತ ಶ್ರೀವೀರನಾರಾಯಣಗೆ
ಪ್ರತತಿತ್ರೈಯ್ಯಗ್ನಿಯೆಂತಲಿ ವಿರಾಜಿಸುತ ತಾಂ
ಹಿತದಲಿಂ ಮಂಡಲದ ಉದ್ಘಾಟನಂ ಗೈದು ಉತ್ತರೋತ್ತರ ವೃದ್ಧಿಗೆ ೬

ಉತ್ತರಾದಿಯ ಮಠಾಧೀಶ್ವರರೆ ಆಗಲೆಂ -
ದೆತ್ತಿತರ ಮುಗಿದು ಗುರುರಾಜರಂ ಪ್ರಾರ್ಥಿಸುತ
ಬಿತ್ತುತ ಸುಹೃದ್ಭಾವ ನೊರೆದುದಂ ಏ ವೇಳ್ವೆ ಉತ್ತರದ ದಿಗ್ವಿಜಯಕೇ
ಚಿತ್ತಶುದ್ಧದಿ ಭಕುತ ವೃಂದ ತಲೆ ಬಾಗಿ ಕರೆ
ಉತ್ತಮ ಮಹಾ ಸಮಾರಾಧನೆ ಶಿರಟ್ಟಿಯಲಿ
ಚತ್ತುರತೆಯಿಂಗೈದು ಧಾರ್ವಾಡ ಸವದತ್ತಿ ಹುಕ್ಕೇರಿ ಬೈಲ್ಹೊಂಗಲ ೭

ಸಂಚರಿಸಿ ಶಿಷ್ಯರುದ್ಧಾರ ಮಂತ್ರಾ ಮುದ್ರೆ
ಕೊಂಚಮನರಾಗದಲೆ ಧರ್ಮೋಪದೇಶವಂ
ಮುಂಚಿನಜ ಮಧ್ವಮುನಿ ಮತದ ತತ್ವವ ಜೀರಿ ಮಹರಾಷ್ಟ್ರ, ದಿಗ್ವಿಜಯಕೇ
ಪಂಚಾಸ್ಯಭಕ್ತನಂ ಗೆಲ್ದ ವರದೇಂದ್ರ ನೀಂ
ವಾಂಛಿತದ ವರವ ಪಾಲಿಸಿರೆಂದು ಪ್ರಾರ್ಥಿಸುತ
ಮಿಂಚುವ ತಟಿದ್ವೋಲು ಮಿರಜ ಸಾತಾರ ಕರ್ಹಾಡಾದಿ ನಗರಗಳಿಗೆ ೮

ದಿಗ್ವಿಜಯಗೈದು ಭಕ್ತರ ಸೇವೆ ಕೈಕೊಳುತ
ದಿಗ್ವಿಜಯಮೂಲರಾಮರ ಪೂಜೆ ಮಾಡುತ್ತ
ಪ್ರಾಜ್ಞ ವರದೇಂದ್ರ ಸಂದರ್ಶನಾಕಾಂಕ್ಷಿಗಳ್ ಪ್ರಸಿಯ ದಿಗ್ವಿಜಯ ಕೇಳ್ದು
ಹಿಗ್ಗುತಲೆ ಸದ್ಭಕ್ತ ವೃಂದವೆಲ್ಲವು ಸೇರಿ

ಬಗ್ಗುತಲೆ ಶ್ರೀಮತಸ್ಥರೊಂದಾಗಿ ಸಂತಸದಿ
ತಗ್ಗದಲೆ ಪತ್ತನವ ಶೃಂಗರಿಸೆ ಬೀದಿಗಳ್ ಸಗ್ಗ ಮಿಗಿಲಾಗೆಸೆದವೊ ೯

ಅಲ್ಲಲ್ಲಿ ತಳಿರು ತೋರಣಗಳಿಂ ಶೋಭಿಯೋ
ಅಲ್ಲಲ್ಲಿ ವಿದ್ವಜ್ಜನರ ಕೂಟ ಸಂಭ್ರಮವೋ
ಅಲ್ಲಲ್ಲಿ ವೇದ ಪಾರಾಯಣದ ಘೋಷವೋ ವಿದ್ಯಾರ್ಥಿ ಸಂಘಸೊಲ್ಲೇಂ
ಅಲ್ಲಲ್ಲಿ ಭಕ್ತಜನ ಸಂದಣಿಯು ಸಲ್ಲಾಪ
ಅಲ್ಲಲ್ಲಿ ದಾಸರಾ ಪದ ಪದ್ಯ ಸುವಿಲಾಸ
ಅಲ್ಲಲ್ಲಿ ಬಂದಿ ಮಾಗಧರ ಜೈ ಜೈ ಘೋಷ ಕಹಳಾದಿ ವಾದ್ಯದೊಡನೆ ೧೦

ಅತಿವಿನಯ ಭಕುತಿಯಿಂ ನತಿಸಿ ಬಿನ್ನಪಗೈದು
ಯತಿವರ್ಯ ಸುಯಮೀಂದ್ರರೇ ನಿಮ್ಮ ಆಗಮನ
ಪತಿತರುದ್ಧಾರಗೋಸುಗವೊ ಶ್ರೀವರದೇಂದ್ರಯತಿಗಳೇ ಒಂದು ರೂಪ
ಕ್ಷಿತಿಗೆ ತೋರುತ ಇಂದು ಬಂದ್ಯೆದಿಧಾರೇನೊ
ಮಿತಿಯಿಲ್ಲ ಮೊಳಗುವೊ ವಾದ್ಯವೈಭವಗಳಿಂ
ಕ್ಷಿತಿಸುರರು ಜೈಘೋಷದೊಡನೆ ಇಂದ್ರಾಣಿಯಂ ಉತ್ಸವದಿ
ವರದೇಂದ್ರರ ೧೧

ಮಂದಿರಕೆ ಕರೆತರಲು ಯಾನದಿಂದಿಳಿದು ವರ -
ದೇಂದ್ರ ಗುರು ಶ್ರೀಪಾದ ಸಂದರುಶನಂ ಗೈದಾ
ಸಂದಪುಳಕೋತ್ಸವದಿ ವಂದಿಸುತ ಸದ್ಭಕುತ ವೃಂದವಂ ಸಂತೈಸುತ
ಮಿಂದು ಶ್ರೀಮೂಲರಾಮಾರ್ಚನೆಯಗೈದು ವರ -
ದೇಂದ್ರ ವೃಂದಾವನದ ಮೇಲೆ ನವರತ್ನ
ಸುಂದರ ಸುಮಂಟಪದಿ ಮೂಲರಾಮರಿಗೆ ಕನಕಾಭಿಷೇಕಂ ಗೈವರೋ ೧೨

ಪಿಂತಿನಾ ಪಿರಿಯರಿಗೆ ದೊರೆಯಲಿಲ್ಲೀ ಭಾಗ್ಯ
ಮಂತ್ರಮಂದಿರರೊಲುಮೆ ಸಂತತಿದ್ದುದಕೆ ಜಯ
ವಂತ ವರದೇಂದ್ರ ತಾಂ ದಂತಿವರದನೆ ಸರುವ ಉತ್ತಮನು ಪಂಚಭೇದ
ಶಾಂತದಿಂ ಸ್ಥಾಪಿಸುತ ಕಂತುಪಿತನೊಲುಮೆಯಿಂ
ದಂತಿಮೇಲೇರಿ ಪುಣೆ ಪತ್ತನದಿ ಮೆರೆದ ವೋಲ್

ಅಂತೆ ವಿಜೃಂಭಣೆಲಿ ದಿಗ್ವಿಜಯ ಗಜವೇರಿ ಬರುವ
ಸಂಭ್ರಮ ಶೋಭೆಯೋ ೧೩

ಮಧ್ವರ ಮಹೋತ್ಕರ್ಷಕೇ ಮಂತ್ರಗೈದಂತೆ
ಸದ್ವೈಷ್ಣವಾಭಾಸ ಕುಹಕಿಗಳ್ ಕಪಟಗಳ್
ಬದ್ಧವೈರದಿ ಇದರ ವಿಜಯಕ್ಕೆ ತಡೆಮಾಡೆ ನಿಂದಿಸಿದೊಡೇನು ಲಾಭೇಂ
ಕ್ಷುಬ್ಧಮನರಾಗಿ ತಾಂ ಸದ್ದುಗೈಯ್ಯುದಲಡಗೆ
ಮಧ್ಯಾಹ್ನರವಿತೇಜ ಘೂಕ ಪಳಿದಡೆ ಏನು
ಮಧ್ವಮತ ದುಗ್ಧಾಬ್ಧಿಚಂದ್ರ ಮಂತ್ರಾಲಯದ ಪ್ರಭುಗಳಿರಲಾವ
ಭಯವೊ ೧೪

ಗುರುವರರು ವಿದ್ಯಾಸಿಂಹಾಸನದಿ ಮಂಡಿಸಲು
ಹರುಷದಿ ಅಶೇಷ ವೈದಿಕ ಲೌಕಿಕರು ನಮಿಸೆ
ಪರಮ್ಮೋಹದಿ ಗುರುಗುಣಗಾನ ಮಾಡುತಲೆ ಅರ್ಪಿಸಿದ ಮಾನಪತ್ರ
ಸರಸ ಸಂಸ್ಕೃತ ಭಾಷೆಯಲ್ಲೆ ಆಶೀರ್ವದಿಸಿ
ವರದೇಂದ್ರ ಗುರುವರರ ಮಠದ ಜೀರ್ಣೋದ್ಧಾರ
ಗರೆವುದನು ಅರುಹಿ ಶಾಸ್ತ್ರಾರ್ಥದಿಂ ಪರನ್ನೆಂದು
ಸಾರ್ದ ಸುಂದರವಿಠಲನಾ ೧೫



# ಶ್ರೀ ಸುಜಯೀಂದ್ರತೀರ್ಥರು

( ೧೯೬೭ - ೧೯೮೭ )

ಹಿಂದಿನವರು ವಿಸ್ತಾರವಾಗಿ ಮತ್ತು ವಿಶಾಲಾರ್ಥದಲ್ಲಿ ಹಮ್ಮಿಕೊಂಡ ಯೋಜನೆಗಳನ್ನು ಮುಂದುವರಿಸುವುದೇ ಒಂದು ಮಹಾ ಸಾಹಸದ ಕೆಲಸವಾಗಬಲ್ಲುದು. ಶ್ರೀ ಸುಜಯೀಂದ್ರ ತೀರ್ಥರು ಪೀಠಸ್ಥರಾಗುವುದಕ್ಕೆ ಮುಂಚೆ ನಾಲ್ಕು ವರ್ಷಗಳ ಕಾಲ ತಮ್ಮ ಗುರುಗಳ ಯೋಜನೆಗಳಲ್ಲಿ ಪಾಲ್ಗೊಂಡಿದ್ದವರು. ಆಮೇಲೆ ತಮ್ಮ ಆಧಿಪತ್ಯದಲ್ಲಿ ಅದನ್ನು ಇನ್ನೂ ಅಷ್ಟು ವಿಸ್ತರಿಸಿದ್ದರಲ್ಲಿ ಅವರ ಹೆಚ್ಚುಗಾರಿಕೆ ವ್ಯಕ್ತವಾಯಿತು. ಕರ್ನಾಟಕದ ಅನೇಕ ಕಡೆಗಳಲ್ಲಿ ಗುರುಸಾರ್ವಭೌಮರ ಮೃತ್ತಿಕಾ ವೃಂದಾವನಗಳಿವೆಯಷ್ಟೇ. ಶ್ರೀ ಸುಜಯೀಂದ್ರರು ದಿಲ್ಲಿ, ಪುಣೆ, ಮುಂಬಯಿ ಮುಂತಾದ ದೂರದ ಊರುಗಳಲ್ಲಿಯೂ ವೃಂದಾವನ ಸ್ಥಾಪನೆಗೆ ಮನಗೊಟ್ಟರು. ವಿಶೇಷವೆಂದರೆ ಸರಕಾರದ ಉಪಟಳ ಬೇಡವೆಂದು ಶ್ರೀಮಠದ ವತಿಯಿಂದ ರಾಯಚೂರು, ಬಳ್ಳಾರಿಗಳಲ್ಲಿ ರಾಯರ ವೃಂದಾವನ ಸ್ಥಾಪನೆ ಮಾಡಿದ್ದಲ್ಲದೆ ಅಲ್ಲಿಯ ಪ್ರತಿದಿನದ ಪೂಜಾರಾಧನೆಗೆ ವ್ಯತ್ಯಯ ಬಾರದಂತೆ ಶಾಶ್ವತ ನಿಧಿಯ ವ್ಯವಸ್ಥೆ ಮಾಡಿದರು.

ಸ್ವತಹ ಆಗಿನ ಪಂಡಿತೋತ್ತಮರಲ್ಲಿ ವ್ಯಾಸಂಗ ಮಾಡಿದ್ದ ಶ್ರೀಗಳು ವಿದ್ವತ್ಸಲಯದಲ್ಲಿಯೂ ಗಮನಾರ್ಹವಾದ ಕೈಂಕರ್ಯವನ್ನೂ ಕೈಗೊಂಡರು. ಶ್ರೀಮಠದ ಸರ್ವತೋಮುಖ ಅಭಿವೃದ್ಧಿಯಲ್ಲಿ ಶ್ರೇಯೋಭಾಗಿಗಳಾಗಿ ಮಾಘ ಶುದ್ಧ ಚತುರ್ಥಿಯಂದು ವೈಕುಂಠವಾಸಿಗಳಾದರು.



## ೬೫

[ಧಾಟಿ : ಸುಂದರ ಗುರು ರಾಘವೇಂದ್ರ]

**ಆರಿಂದ ಸ್ತುತಿಸಲೊಶ ಶ್ರೀ ರಾಘವೇಂದ್ರಾಂಘ್ರಿ**
**ವಾರಿಜ ಭೃಂಗ ಶ್ರೀ ಸುಜಯೀಂದ್ರರ** ಪ
ಪೂರ್ವ ಆಶ್ರಮದಿ ವಿಚಾರವ ಇವರದು
ಪ್ರೇರಣೆ ಹರಿಯಿಂದ ಸಾರುವೆ ನಾನಲ್ಪ ಅ.ಪ.

ಶೀಲಗುಣವ್ರತ ಕಾಲಕಾಲದಿ ನೇಮ ಪಾಲನೆ ಗೈದ ಸುಜ್ಞಾನೇಂದ್ರರ
ಬಾಲಕರೆನಿಸಿ ಶ್ರೀ ಕೀಲಕಾಬ್ದ ಪುಷ್ಯ ಶುಕ್ಲಪಕ್ಷದ ಅಷ್ಟಮೀ ದಿನದೀ
ಶಾಲಿವಾಹನ ಶಕದ ಸಾವಿರದೆಂಟು ಶತ ಮೂವತ್ತು ಅಬ್ದದೀ
ಶ್ರೀ ಲಕ್ಷ್ಮೀಬಾಯಿಯ ಕುವರ ವೆಂಕಟರಾಘವೇಂದ್ರರು ಎಂಬ ನಾಮದೀ
ತಾಳಿ ಜನ್ಮವು ಘಟದಿ ಶಶಿ ಇರೆ ಪೂರ್ವಭಾದ್ರದಿಂದ ಗ್ರಹಬಲದಿ
ರಾಜಿಸುತ ಮುದದೀ
ಶಾಲೆ ಪಾಠಗಳಲ್ಲಿ ಪ್ರತಿಭಾಶಾಲಿಗಳು ಎಂದೆನಿಸಿ ಮುದದಲಿ
ಸತ್ಫಲ ಕರ್ಮಗಳನ್ನೆ ಜರಿದು ಸಕಾಲದಲಿ ಉಪನಯನಗೊಂಡರ ೧

ಎಲತ್ತೂರು ಮತ್ತು ಎಳೆ ಊರಿನವರಾದ ಚಲುವ ನಾಮದ ಒಂದೇ ಗುರುಗಳಲ್ಲಿ
ಒಲಿಸಿ ಅವರ ಮನ ನಲಿದು ಷಟ್ಸ್ಮೃತಿಗಳ್ಪಿಡದಭ್ಯಾಸವ ಮಾಡಿ
ಕಲಿತನದಿ ವಿದ್ವತ್ಪೂರ್ಣ ಸಭೆಯೊಳು ಹಲವು ವಾಕ್ಯಾರ್ಥಗಳ ತಾವ್ಮಾಡಿ
ಗೆಳೆಯ ಗುಸ್ಕಾಳ್ ವೆಂಕೋಬಾರ್ಯರ ಕಲೆತು ಉಭಯರು ಶಾಸ್ತ್ರಗಳ ನೋಡಿ
ಫಲಭರಿತ ಮಧ್ವರ ಶಾಸ್ತ್ರ ಉಪವನದೊಳಗೆ ಓಡ್ಯಾಡಿ ಆನಂದಗೂಡೀ
ಲಲನೆ ರತ್ನಾಂಬೆಯರು ಎಂಬ ಚಲುವೆಯೊಡನೆ ವೈವಾಹವಾಗುತ
ಗಳಿಸಿ ಕೀರ್ತಿಯ ಪುತ್ರ ದುಹಿತರ ಕೆಲವು ಕಾಲದಿ ಪಡೆದು ಮೆರೆವ ೨

ವಿಷ್ಣು ಪಂಚಕವ್ರತ ಕಷ್ಟಸಾಧ್ಯವಾದ ಎಷ್ಟೆಷ್ಟೊ ವ್ರತಧರ್ಮ ಆಚರಿಸಿ
ಸೃಷ್ಟಿಗೊಡೆಯ ಮುದ್ದು ಕೃಷ್ಣನುಡುಪಿಯ ನೋಡಿ ಶರಧಿಯ ಸ್ನಾನವೇ ಮಾಡಿ
ದಿಟ್ಟ ಶ್ರೀ ಸರ್ವಜ್ಞರಾಯರು ಪುಟ್ಟಿ ಬಾಲ್ಯದಿ ನಲಿದ ಪಾಜಕ ಕ್ಷೇತ್ರವೇ ನೋಡಿ
ಬೆಟ್ಟದೊಡೆಯ ಶ್ರೀ ವೆಂಕಟೇಶನ ಸ್ಪಷ್ಟ ಮನದಲಿ ನೋಡಿ ಸ್ತುತಿ ಮಾಡಿ

ಇಟ್ಟಿಗಿಯ ಮೇಲ್ಪದವಿಟ್ಟು ನಿಂತ ವಿಠಲಾಂಘ್ರಿಯ ಮುಟ್ಟಿ ಕೊಂಡಾಡಿ
ಬಹುಯಾತ್ರೆಗಳ ಮಾಡಿ
ದುಷ್ಟ ರಾವಣ ಶಿರವ ತರಿಯಲು ಕಟ್ಟಿದಾ ಸೇತುವೆ ಪರಿಯಂತ
ಅಷ್ಟು ಯಾತ್ರೆಗಳನ್ನೆ ಗೈದು ವಿಶಿಷ್ಟ ಕರಣದಿ ಶುದ್ಧರಾದರ ೩

ಶ್ರೀ ಸುಯಮೀಂದ್ರರು ಶೋಭನಕೃತು ಅಬ್ದದಿ ಶ್ರೀ ಶುಭ ಶೋಭನ ಜನಕಾಗಲು
ಆಶ್ವೀಜನಂದಜ ಭೇದ ತಿಥಿ ಶ್ರೀ ಶಾಂತಿವಾಸರ ದಿವ್ಯ ತಾರೆಯೊಳು
ತೋಷದಲಿ ಶ್ರೀ ಮುಖದಿಂದ ವಿದ್ವಜ್ಜನರ ಕರೆಸುತ ಅವರ ಎದುರಿನೊಳು
ಭಾಸುರ ಸುಜ್ಞಾನಯತಿಗೆ ಸ್ವಪ್ನಲಬ್ಧ ಶ್ರೀ ರಾಘವೇಂದ್ರರೊಳು
ಭೂಸುರ ತತಿವೇದಘೋಷದ ವಾದ್ಯ
ವೈಭವ ದಿವ್ಯ ನಾದದೊಳು ಶ್ರೀಗರಳಪುರಿಯೊಳು
ಲೇಸುತನದಿ ವೇದಾಂತ ರಾಜ್ಯವ ಸೋಶಿಲಿಂದ ಪಟ್ಟಾಭಿಷೇಕವ
ದೋಷ ರಹಿತ ಮುಹೂರ್ತದೊಳು ಗೈಯೆ ದಾಶರಥಿ ಪದ ಪೂಜೆಗೈದರ ೪

ಕನಕಕಾಂತಿಯೊಳೆಸವ ಕನಕಶಯ್ಯಜನಂಶಜ ಮಿನುಗುವ
ರಾಯರಿಗೆ ಕನಕಾಭರಣವೆ ಮಾಡಿಸಿ
ಕನಕಗರ್ಭಾರ್ಚಿತ ಮೂಲ ಶ್ರೀರಾಮನ್ನ ಕನಕ ಮಂಟಪ
ರಚಿಸಿ ಸಂತತ ಬಿಡದೆ ಪೂಜಿಸುತ
ಅನುದಿನವು ಯಾತ್ರೆಗೆ ಬರುವ ನಾಲ್ಕು ಸಹಸ್ರ ಜನರಿಗೆ
ಅನ್ನದಾನವ ಬಿಡದೆ ಗೈಯುತ್ತ
ಸುನವ ಭವನಂಗಳನೆ ನಿರ್ಮಿಸಿ ಉಚಿತ ವಸತಿ ಸಿಬ್ಬಂದಿಗೀಯುತ್ತ
ಉನ್ನತದ ಶ್ರೀಗುರುಸಾರ್ವಭೌಮಾಖ್ಯ ಬೃಹದ್ವಿದ್ಯಾಪೀಠ ವಿರಚಿಸುತ
ತತ್ಸಾಖ್ಯೆ ರಚಿಸುತ್ತಾ ಅನುಗಾಲ ಪ್ರಾಧ್ಯಾಪಕರ ಪೋಷಿಸೆ ಭೂರಿ ಮಾಸಾಶನವನೀಯುತ
ಎಣಿಕೆ ಬಹು ವಿದ್ಯಾರ್ಥಿಗಳಿಗೆ ಆಸನವಸನಾದಿತ್ತು ಪೊರೆವರ
ರಾಯಚೂರಿನ ದಿವ್ಯ ಜವಾಹರ ನಗರದಿ ಭಾಗ್ಯನಗರದ ಭವ್ಯ ಬರಕತಪುರದಿ
ಪ್ರಿಯವಾದ ಬಳ್ಳಾರಿ ನಿಜ ಶ್ರೀಶನ ಪೇಟೆಯಲಿ ವಾಯು
ಸಹ ಶ್ರೀರಾಘವೇಂದ್ರರ ಸ್ಥಾಪನೆ ಮಾಡಿ
ನ್ಯಾಯದಿಂದಲಿ ಬಂದ ಹಣ ಅಲ್ಲಲ್ಲಿ ಶಾಶ್ವತ ನಿಧಿಗಳೇ ಹೂಡಿ

ಮಯನಿಂದ ನಿರ್ಮಿತವೆಂಬ ತೆರ ಕಲ್ಯಾಣ ಮಂಟಪ ಹರುಷದಲಿ ಮಾಡಿ
ಕಾರ್ಯವೈವಾಹಾದಿಗಳಿಗೆ ಭೂರಿ ವೆಚ್ಚದಿ ಅಖಿಲ
ಸದುಪಾಯಂಗಳೇ ನೀಡಿ ಅಸ್ತಿತ್ವ ಕಾಪಾಡಿ
ತಾಯಿ ಮಕ್ಕಳ ಸಲಹುವಂದದಿ ನೋಯಗೊಡದಲೆ ಶಿಷ್ಯವರ್ಗವ
ರಾಯರ ಬೊಂಬಾಯಿ ಪೂನಾನೇಕ ಸ್ಥಳದಿ ಪ್ರತಿಷ್ಠೈಗೈದರ ೬

ಹಿಂದೆ ಭಾಗಣ್ಣಾದಿ ಪೇಳ್ದ ದಾಸರ ವಾಕ್ಯ ಇಂದು ಸತ್ಯವ
ಮಾಡಿ ತೋರುತ್ತಿಹರು
ಇಂದ್ರನ ಪುರದಂತೆ ಮಂತ್ರ ಮಂದಿರ ರಚಿಸಿ ಬಂಧುರ ಭವನ ನಿರ್ಮಿಸಿ
ಬಂದ ಶ್ರೀ ಗುರುರಾಜ ಭಕುತರಿಗೆಲ್ಲ ಸೌಲಭ್ಯಗಳ ಕಲ್ಪಿಸಿ
ಗಂಧವಾಹನ ಸಮಯ ಶ್ರೀಮತ್ಸಭೆಯ ವರ್ಷಕೆ ದ್ವಂದ್ವವಾಚರಿಸಿ
ವಂದ್ಯೆದುಶಾಸ್ತ್ರದ ಬುಧರ ತತಿಗೆ ಕನಕ ಧನ ಬಿರುದನ್ನೆ
ಕರುಣೇಸಿ ಮೃಷ್ಟಾನ್ನದಲಿ ತಣಿಸೀ
ಎಂದಿಗೂ ಶ್ರೀಮಠದ ಸಂಪದ ಕುಂದಿಸದೆ ಬಹು ವಿಧದಿ ಪೆಚ್ಚಿಸಿ
ತಂದೆ ಶ್ರೀ ಲಕುಮೀಶನಂಘ್ರಿಯ ದ್ವಂದ್ವ ಧ್ಯಾನದಿ ಸುಜಯ ಪಡೆದರ ೭



## ೨೮. ಶ್ರೀ ಸುಶಮೀಂದ್ರತೀರ್ಥರು

( ೧೯೮೭ - ......... )

ಕೇವಲ ೧೫ ವರ್ಷಗಳ ಹಿಂದೆ ಪೀಠಾಧಿಪತಿಗಳಾಗಿ ಬೆಳಗಿರುವ ಈ ನಮ್ಮ ಶ್ರೀಗಳವರ ಸಾಧನೆಗಳು ಪರಿಚಿತವಾಗಿರುವುದರಿಂದ ಹೆಚ್ಚು ಹೇಳಬೇಕಾಗಿಲ್ಲ. ವಿವಿಧ ಸ್ಥಳಗಳಲ್ಲಿ ಗುರುಸಾರ್ವಭೌಮರ ವೃಂದಾವನಗಳನ್ನು ಸ್ಥಾಪಿಸುವ ಕೆಲಸವನ್ನು ಮುಂದುವರಿಸಿದರು. ( ಉದಾ: ಗೆ ಮಾಸ್ಕೊ ) ಇವರ ಕಾಲದ ಬೃಹತ್ ಯೋಜನೆಯೆಂದರೆ ಶ್ರೀ ಗುರುರಾಜರ ಗ್ರಂಥಗಳನ್ನು ಕನ್ನಡ ಅನುವಾದದೊಂದಿಗೆ ಪ್ರಕಟಿಸಬೇಕೆನ್ನುವುದು. ಅಗತ್ಯವಾಗಿ ಆಗಬೇಕಾದ ಕೆಲಸವಿದು. ಭೀಮರಥಿ ಶಾಂತಿಯ ಉತ್ಸವ ಕೈಕೊಂಡರು. ಈಚೆಗೆ ಬದರಿಯ ತನಕ ಹೋಗಿ ಮಧ್ವಮತದ ಪ್ರಚಾರ ಮಾಡಿದ್ದಾರೆ. ಹರಿದಾಸ ಸಾಹಿತ್ಯಕ್ಕೂ ಗಮನವಿತ್ತು ಸಮೀರ ಸಮಯ ಸಂವರ್ಧಿನೀ ಕಾರ್ಯದಲ್ಲಿ ಆ ಕ್ಷೇತ್ರಕ್ಕೂ ಅವಕಾಶ ಒದಗಿಸುತ್ತಿದ್ದಾರೆ. ತಮ್ಮ ಗುರುಗಳು ಆರಂಭಿಸಿದ 'ಆರೋಗ್ಯ ಮಂದಿರ'ದ ಕಟ್ಟಡವನ್ನು ಪೂರ್ಣಗೊಳಿಸಿದ್ದಾರೆ. ಮಂತ್ರಾಲಯದಲ್ಲಿಯ ಗುರು ಸಾರ್ವಭೌಮರ ರಥಕ್ಕೆ ಬಂಗಾರದ ತಗಡನ್ನು ಲೇಪಿಸಿದ್ದು ರಥವು ಸುಂದರವಾಗಿ ಎದ್ದು ಕಾಣುವಂತಿದೆ. ರಿತ್ತಿಯಲ್ಲಿ ಇರುವ ವೃಂದಾವನದ್ವಯಕ್ಕೆ ಪ್ರಾಂಗಣ, ಪಾಕಾಲಯಗಳನ್ನು ನವೀಕರಿಸಿದ್ದಾರೆ. ಈಚೆಗೆ ಅವರ ತುಲಾಭಾರವು ಅತ್ಯಂತ ವಿಜೃಂಭಣೆಯಿಂದ ನೆರವೇರಿತು. ಶ್ರೀ ಸುಶಮೀಂದ್ರರು ದೀರ್ಘಕಾಲ ಬಾಳಿ ಅವರಿಂದ ಇನ್ನಷ್ಟು ಸತ್ಕಾರ್ಯಗಳು ನೆರವೇರಲೆಂದು ಶ್ರೀ ರಾಘವೇಂದ್ರ ಗುರ್ವಂತರ್ಗತ ಮೂಲರಾಮದೇವರಲ್ಲಿ ಪ್ರಾರ್ಥನೆ.

■ ■ ■

೬೬

**ದಶದಿಶದೊಳು ಯಶ ಪಸರಿಸಿ ರಾಜಿಪ**
ಸುಶಮೀಂದ್ರ ಯತಿಯ ನೋಡಿ । ಸಂತತ ಪಾಡಿ ಪ
ವಸುಧಿಜೆಯಾಣ್ಮಮೂಲ ಬಿಸಜಾಂಘ್ರಿ ಭೃಂಗಶ್ರೀ
ಎಸೆವ ಸುಜಯೀಂದ್ರರ ಕರ ಸಂಜಾತನೆ ಅ.ಪ.

ಭೂಪರಾಜ ಶ್ರೀ ಗೋಪಾಲಾರ್ಯರ ಕುವರಾ। ಬಹು ಗಂಭೀರ
ಗೋಪಾವಿ ಗುಣ ಬಿಟ್ಟು ಶ್ರೀ ಸುಪ್ರಜ್ಞಾನೇಂದ್ರಾರ್ಯ । ಇರುವಂಥ ಚರಿಯ
ತಾಪಸ ಸುಯಮೀಂದ್ರ ಸುಜಯೀಂದ್ರರ ಕೃಪೆ ।
ಶ್ರೀ ಪೋಷಿತನಾಗಿ ಮಹಿಷಪುರೀಲಿದ್ದಾ। ಭವ ಬಾಧೆ ಗೆದ್ದ ೧

ಪತ್ನಿಸುತರಿಂದ ಗಾರ್ಹಸ್ತ್ಯದಲಿ ಸುಖಿಸೆ। ಇವರನು ಕರಸೇ
ಯುಕ್ತವರಿತು ಶ್ರೀ ಸುಜಯೀಂದ್ರತೀರ್ಥರು ಪರಮ। ಹಂಸಾಶ್ರಮ
ರಕ್ತಾಕ್ಷಿ ಫಾಲ್ಗುಣ ವದ್ಯ ತ್ರಯೋದಶಿ
ಇತ್ತ ಬಿಚ್ಚಾಲಿಯೊಳ್ಮಂತ್ರೋಪದೇಶ। ಸುಜನಕೆ ಹರುಷ ೨

ತಾಳಿ ಸಂತೋಷವ ನಾನಾ ವಿಧ ವಾದ್ಯ ಮಾಡಿ। ಶೃತಿ ಧ್ವನಿಗೂಡಿ
ಮೂಲರಾಮನ ಪೂಜೆ ಗುರು ಆಜ್ಞೆಯಲಿ ಗೈದಾ। ಪೊಂದಿದ ಮೋದಾ
ಪೇಳುವೆ ಪ್ರಥಮದಿ ಪಂಚಮುಖೀಶನ
ಜಾಲಬುಧರ ಗೂಡಿ ದರ್ಶನ ಗೈದಾ। ಹರಿಲೀಲೆ ನೆನೆದಾ ೩

ಎಲ್ಲ ಕಾರ್ಯಕೆ ಜಯರಾಯರ ನಾಮವೇ ಸಿದ್ಧಿ। ಎಂಬಂಥ ಬುದ್ಧಿ
ಬಲ್ಲಿದರಿವರು ಬಹುಕೋಟಿ ಜಪಗಳ ಮಾಡಿ। ಗುರುಗಳ ಬೇಡಿ
ನಿಲ್ಲದೆ ಭಕುತರ ಸೊಲ್ಲಿಗೆ ಇಷ್ಟಾರ್ಥ
ಸಲ್ಲಲು ಮಂತ್ರಾಕ್ಷತೆ ಕೊಡುವಾ। ಆಶಿಷವೀವ ೪

ಆರೋಗ್ಯಮಂದಿರ ಸುಜಯೀಂದ್ರರು ಶುರು ಮಾಡೆ। ಇದು ಪೂರ್ಣ ಮಾಡಿ
ಶ್ರೀರಾಯರ ಮಠ ಪ್ರಾಕಾರ ನೆರಳ ಕಲ್ಪಿಸೀ । ಬಹು ಧನ ವೆಚ್ಚಿಸೀ
ಭೂರಿ ಶಿಷ್ಯರು ಸೇರುತ ಬದರಿಯ
ಯಾತ್ರೆಗೆ ಬಹು ಧನ ವೆಚ್ಚ ಗೈದಾ। ಯುವದಿ ಬಂದಾ ೫

ಭಾರತ ಡಿಲ್ಲಿಯೊಳ್ಸುಜಯೀಂದ್ರರು ಮಠ ಮಾಡೆ । ಹಣ ರಾಶಿ ನೀಡೆ
ಶ್ರೀ ರಾಘವೇಂದ್ರ ವಾದೀಂದ್ರ ಸುಜಯೀಂದ್ರರ ಸ್ಥಾಪಿಸೀ। ಉತ್ಸವ ಗೈಸಿ
ಧಾತೃ ವತ್ಸರದ ಆರಾಧನೆಯೊಳ್।
ಶ್ರೀ ರಾಘವೇಂದ್ರರಿಗೆ ತೇರ ಸ್ಫೂರ್ಜಿಪಿತ್ತ। ವೆಚ್ಚಿಸಿ ಬಲು ವಿತ್ತಾ ೬

ಶ್ರೀ ಸುಜಯೀಂದ್ರರು ಜಿತಾಮಿತ್ರರಂದದಿ ಬಾಳೆಂದು ।
ವ್ಯಾಸದಾಸ ಸಭೆ ಪ್ರತಿವರುಷ ಎರಡು ಮಾಡಿ । ಲಕುಮೀಶನ ಪಾಡಿ
ದಾಸರ ಮಾನವಿ ಕ್ಷೇತ್ರಾದಿ ರಾಯರ।
ತೋಷದಿಂದ ಪ್ರತಿಷ್ಠೆ ಗೈದಾ। ಸುಜನರ ಕಾಯ್ದ ೭

■ ■ ■

## ೬೭

[ರಾಗ: ತಿಲಂಗ್, ತಾಳ -ಭಜನ್‌ಟೇಕ್]

ರಜತ ತುಲಾಭಾರ । ವಿಜಯೋತ್ಸವದ ಪ
ಅಜಕರಾರ್ಜಿತನ । ಭಜಿಸಿ ಹಾಡುವ ಗುರು
ಸುಜಯೀಂದ್ರ ತೀರ್ಥರ ಕ। ರಜ ಸುಶಮೀಂದ್ರರ ಅ.ಪ.

ಯತಿ ಮಧ್ವರಿಂಗಿತವೋ । ಜಿತಾಮಿತ್ರರ್ಧರಕೆಯೋ
ಖ್ಯಾತ ರಾಘವೇಂದ್ರರ । ಕೀರ್ತಿ ಅನುಗ್ರಹವೋ ೧

ಧೀರೇಂದ್ರ ಸುಶೀಲೇಂದ್ರ। ಗುರು ಸುಯಮೀಂದ್ರರ
ವರ ಕೃಪೆಯೊಳು ಮೆರೆವ । ಗುರು ದೇಶಿಕಾರ್ಯರ ೨

ಹಿಂದಿನ ತಪ ಫಲದಿ । ಇಂದು ಮೌನದಿ ಮೆರೆದು
ನಂದ ಮುನಿಯ ತತ್ವ। ಸಂದರ್ಶನದಿ ತೋರ್ವರ ೩

ಸರ್ವಮೂಲವ ಸವಿದು। ಕಿವುಡ ಮೂಗರ ಪರಿ
ಸರ್ವರೊಳಗೆ ಚರಿಪ। ಅವಧೂತಾನಂದರ ೪

ರಾಮ ರಾಮ ರಾಮ । ಸುಮತೀಂದ್ರರಿಗೊಲಿದವನ
ನೇಮದ್ಯರ್ಚಿಪ ಗುರು । ಯಮಿ ಕುಲೋತ್ತುಂಗರ ೫

ಪ್ರಮಾಥಿ ಫಾಲ್ಗುಣದ । ಧೂಮಪಕ್ಷ ಷಷ್ಠಿ
ಸೋಮ ಪೂರ್ವವಾರ। ಹಿಮಜೆಯ ವತಿ ಪುರದಿ ೬

ಧೀರವಿಠ್ಠಲ ಮೂಲ। ಸಿರಿ ರಾಮ ಪರನೆಂದು
ಧಾರುಣಿಯೊಳು ಸಾರ್ವ। ಧೀರ ಸುಶಮೀಂದ್ರರ ೭

■ ■ ■

# ಅನುಬಂಧಗಳು

(೧) ಮಂತ್ರಾಲಯ ಮಠದ ಯತಿವರ್ಯರು ಸ್ವಯಂ ರಚಿಸಿದ ಕೀರ್ತನೆಗಳು

(೨) ಯತಿವರ್ಯರನ್ನು ಕುರಿತು ಹರಿದಾಸರ ಪೆಟ್ಟಿನ ಹಾಡುಗಳು

(೩) ಶ್ರೀ ವಿಜಯೀಂದ್ರತೀರ್ಥರ ವಾದವೈಖರಿ

(೪) ಸಂಗ್ರಹದಲ್ಲಿರುವ ಕೀರ್ತನೆಗಳ ಅಕಾರಾದಿ ಸೂಚಿ.

ಅನುಬಂಧ ೧

# ಮಂತ್ರಾಲಯದ ಯತಿಗಳು ಸ್ವಯಂ ರಚಿಸಿದ ಕೀರ್ತನೆಗಳು

## ಪರಿವಿಡಿ

### ಶ್ರೀ ವಿಜಯೀಂದ್ರರು

1. ತಪ್ಪುಗಳನರಸ ತನ್ನ ನಂಬಿದವರ ( ಉಗಾಭೋಗ )
2. ಯೋಗಿ ವ್ಯಾಸರಾಯರೆಂಬ ವಿಚಿತ್ರ ಮೇಘ
3. ಯಾಕೆಲ ಮನವೆ ನೀ ಎನ್ನ ( ಸುಳಾದಿ )
4. ಪರಬೊಮ್ಮ ಹರಿಯು ತಾ ನರರೂಪ ತಾಳಿಹ ( ಸುಳಾದಿ )

### ಶ್ರೀ ರಾಘವೇಂದ್ರರು

5. ಇಂದು ಎನಗೆ ಗೋವಿಂದ ನಿನ್ನ ಪಾದಾರವಿಂದ

### ಶ್ರೀ ಸುಮತೀಂದ್ರರು

( ಕೃತಿಗಳು ಲಭ್ಯವಿಲ್ಲ )

### ಶ್ರೀ ವಾದೀಂದ್ರರು

6. ಮುನ್ನೇನು ಸುಕೃತವ ಮುದದಿ
7. ಮೂಲರಾಮನ ದಿವ್ಯ ಮೂರುತಿ

### ಶ್ರೀ ವರದೇಂದ್ರರು

8. ತಂತ್ರಸಾಗ ( ಕನ್ನಡದಲ್ಲಿ )

# ವಿಜಯೀಂದ್ರ ವಿರಚಿತ

## 1

## ಉಗಾಭೋಗ

ತಪ್ಪುಗಳನರಸ ತನ್ನ ನಂಬಿದವರ
ಶ್ರೀಪತಿ; ತಪ್ಪು ಮಾಡಿದ ಅಜಮಿಳ ಉಮಾಪತಿ ಮುಖರ
ತಪ್ಪು ನೋಡಿದನೆ
ಎನ್ನಪ್ಪ ಶ್ರೀ ವಿಜಯೀಂದ್ರರಾಮ ದಯಾನಿಧಿ

## 2

**[ರಾಗ- ಆನಂದಭೈರವಿ, ತಾಳ : ರೂಪಕ ]**

ಯೋಗಿ ವ್ಯಾಸರಾಯರೆಂಬ ವಿಚಿತ್ರ ಮೇಘ
ಬೇಗ ವಿಷ್ಣುಪಾದವ ತೋರಿಸುತ್ತ ಬಂತಿದಿಕೊ ಪ

ಮಾಯಿಮತವೆಂಬ ತಾರಾಮಂಡಲವ ಮುಸುಕುತ್ತ
ವಾಯುಗತಿಯಿಂದೆ ಗಮಿಸುತ್ತಲಿ
ಹೇಯ ಕಾಮಾದಿಗಳೆಂಬ ರಜವನಡಗಿಸುತ್ತ
ನಾಯಕನುಪೇಂದ್ರನಾಜ್ಞೆಯ ಪಡೆದು ೧

ಲಿಂಗಜನಯ್ಯನೇ ಪರನೆಂದು ಘುಡಿಘುಡಿಸುತ್ತ
ಕಂಗಳೆಂಬ ಮಿಂಚನೆ ನೆರಹಿ ಲೋಕದಿ
ಹಿಂಗದೆ ಪರಿವ ಅಜ್ಞಾನವೆಂಬ ಕತ್ತಲೆಯ
ಭಂಗಿಸಿ ಸುರಪಥವ ತೋರಿಸುತ್ತ ೨

ಸಿರಿಯರಸನ ಸಮ್ಯಗ್‌ಜ್ಞಾನವೆಂಬ ಪೈರಿಗೆ
ಬೇರು ಬಿಡೆ ಹರಿಕಥೆಯೆಂಬ ಮಳೆಗರೆದು
ನೆರೆ ಶಿಷ್ಯಮನವೆಂಬ ಕೆರೆತುಂಬಿಸಿ ಕೆರೆಗಳೆಂಬ
ಕೋಡಿ ಹರಿಸುತ ವಿಜಯೀಂದ್ರನ ಗುರು ೩

# 3

## ಸುಳಾದಿ

### ಧ್ರುವತಾಳ

ಯಾಕೆಲ ಮನವೇ ನೀ ಎನ್ನ ಕೀಕಟ ದೇಶಕ್ಕೆ ಶಳದು ಇಂದು
ಲೋಕೈಕನಾಥ ಹರಿಯ ಪಾದಕೆನ್ನನು ದೂರನ ಮಾಡಿ ಇಂದು ಮಾ-
ಯಕೈಲ ಜಿಹ್ವೆ ಲೋಕ ವಾರ್ತಿಗಳ ಸೇವಿಪದು
ಶ್ರೀಕಾಂತನ ವಾರುತಿ ನುಡಿಸದಂತೆ ಮಾಡಿದೆಯಾ
ಯಾಕೆಲ ಕಿವಿಯೆ ಪೋಕರ ಆಲಾಪಗಳ ಕೇಳಿ ಕೆಡದೀ
ಯಾಕೆಲ ಕಣ್ಣೆ ಪರವಧುಗಳ ಆಲೋಕಿಸಿ ಎನ್ನನು ಬಯಸಿದಿ
ಸಾಕು ಸಾಕು ನಿಮ್ಮ ಸಂಗತಿ ಎಂಬಂತೆ ನೀ ಮಾಡಿದಿ
ಕಾಕು ಮಾಡದೆನ್ನ ಸಿರಿ ವಿಜಯಿಂದ್ರರಾಮನ್ನ ಅಗಲಿಸಿದಿ ೧

### ಮಟ್ಟತಾಳ

ಹರಿಚಿಂತನ ನಾಮ ಮೂರೂತಿ ಕೀರುತಿಗಳ
ವಿರಚಿಸಿ ಸವಿಯದ ನೋಡದ ಕೇಳದ
ಕರಣಗಳಿದ್ದೆಡೆ ಇಲ್ಲದಿದ್ದಡೇನೊ
ಹರಿಗೆ ಸಮ್ಮುಖವಾಗದ ಕಾರಣ
ಕರಣಂಗಳ ಶಿರವಳಿವದೊಳಿತೊ
ಸಿರಿ ವಿಜಯಿಂದ್ರರಾಮನಲ್ಲದನ್ಯ ವಿಷಯ-
ಕ್ಕೆರಗುವ ಕರಣಂಗಳ ಶಿವರಿವದ್ದೊಳಿತೊ ೨

### ರೂಪಕತಾಳ

ಮನುಮಥನಯ್ಯನಕಿಂತ ಕಡು ಚಲ್ವನಾವನೊ।
ವನಜ ಭವನ ತಂದೆಕಿಂತ ದೇವರೊಳದಾವನೊ।
ಮುನಿ ಮನಕೆ ಗೋಚರನಾಗಿ ತೋರಿ ತೋರನದಾವನೊ।
ಘನ ವಿಜಯಿಂದ್ರಶಾಮ ಪೊರೆಯಿಲೆಮ್ಮನುದಿನ ೩

## ಝಂಪತಾಳ

ನಿನ್ನ ಕೀರುತಿ ಕಿವಿಗೆ ನಾಮ ಎನ್ನ ನಾಲಿಗೆ ।
ಎನ್ನ ಕಣ್ಣಿಗೆ ನಿನ್ನ ಮೂರ್ತಿ ದೊರೆಯಲೊ।
ಎನ್ನ ಮನಕೆ ನೆನೆವ ಸಿರಿ ವಿಜಯೀಂದ್ರರಾಮ
ಎನ್ನ ಕಣ್ಣಿಗೆ ನಿನ್ನ ಮೂರ್ತಿ ದೊರೆಯಲೊ । ೪

## ತ್ರಿವಿಡಿ ತಾಳ

ಮೂರೇಳು ಕರಣಂಗಳಿರೇ ನೀವು ।
ಸಿರಿ ಪತಿಗೆ ದೂರರಾಗಿ ನರಕಯಾತನೆ ಗೈದದೆ
ಹರುಷಗುಂದಲಿ ಲೇಸಾದೆ
ಸುರೇಶ ಮೊದಲಾಗಿ ಅರ್ಚಿಪ ಪರಮ ಪಾವನಾ ಚರಣ
ಶ್ರೀ ಗರುಡ ದೇವರ ದೇವನ
ಸಿರಿ ವಿಜಯಿಂದ್ರರಾಮ ಪೊರೆಯಲೆಮ್ಮನುದಿನ ೫

## ಅಟ್ಟತಾಳ

ತಪ್ಪನೊಪ್ಪನರಸನು ತನ್ನ ನೆರೆ ನಂಬಿದ ।
ಶ್ರೀಪತಿ ಅಜಮಿಳ ಸುರಪತಿ ಮುಖರ।
ತಪ್ಪು ಮಾಡಿದವರ ತಪ್ಪು ಹಿಡಿದನೆ ಎ। -
ನ್ನಪ್ಪ ಶ್ರೀ ವಿಜಯೀಂದ್ರರಾಮ ದಯಾನಿಧೇ ೬

## ಆದಿತಾಳ

ನಾರಾಯಣನೆಂದು ಮಗನ ಕರಿಯಲಾಗ
ಆರತನಾಗಿ ಅವಾತ ಆಕರದನೆಂದು ಆ -
ದರದಿಂದಲಿ ಕೇಳಿ ಅಜಾಮಿಳನ

ಭೂರಿ ಭೀತಿಗಳು ಕ್ಷಣದಿ ಬಿಡಿಸೆನೆ
ಸಾರಹೃದಯನೆಂದರಿದರೆ ಬಿಡುವನೆ
ಮಾರಮಣ ಸಿರಿ ವಿಜಯಿಂದ್ರರಾಮ ೭

### ಜತೆ

ಸಾಧುಗಳನು ಸಂತತ ಸಲಹುವ ಸು
ಬೋಧ ಮೂರುತಿ ಸಿರಿ ವಿಜಯಿಂದ್ರರಾಮ ೮

## 4

## ಸುಳಾದಿ

### ಧ್ರುವತಾಳ

**ಪರಬೊಮ್ಮ ಹರಿಯು ತಾ ನರ ರೂಪ ತಾಳಿದ**
ನರನಾದ ದಶರಥನ ವರ ದೇಹದಲವತರಿಸಿ
ಸಿರಿರಾಮನೆಂಬ ಪುಣ್ಯನಾಮದಿಂದ ಮೆರೆವುತ್ತಿರೆ
ಹರುಷದಿಂದ ಲೀಲೆಗೈದು ಕರೆಯ ಬಂದ ಕೌಶಿಕನ
ಉರುಯಜ್ಞ ವಿಘ್ನವನು ಪರಿಹರಿಸುವುದಕಾಗಿ ಪರಬೊಮ್ಮ
ಪರಿತಂದು ಪರಿಹರಿಸಿದ ಮುನಿವರನ
ಹರುಷದಿಂದ ಪರಮಾನಂದ ಶರಧಿಯ ಲೋಲಾಡಿಸಿದ
ಸಿರಿ ವಿಜಯೀಂದ್ರರಾಮ ಪೊರೆಯಲೆಮ್ಮನಾವಾಗ ೧

### ಮಠ್ಯ ತಾಳ

ಈತನೆಂತು ಯಜ್ಞದ ವಿಘ್ನವ ಪರಿಹರಿಸುವ
ಪೋತ ಮಹಾದ್ಭುತರಂತಿಹ ರಕ್ಕಸರ
ವೀತ ಭಯನಾಗಿ ಕೊಲ್ಲುವದೆಂತೊ
ಪೂತ ಮಹದ್ಭೂತಂತಿಹ ರಕ್ಕಸರ

ಭೂತಳಕಚ್ಚರಿ ವಿಜಯೀಂದ್ರರಾಮನ ಚರಿತಾ
ಪೂತ ಮಹಾದ್ಭುತರಂತಿಹ ೩

## ರೂಪಕತಾಳ

ಜನಕನಂದು ಜನಪತಿಯ ಮನೆಗೆ ಪೋಗಿ
ಜಾನಕಿಯ ಮನಕೆ ಹರುಷವಪ್ಪಂತೆ
ಜನಪದ ಕೈವಾರಿಸುತ್ತಿರೆ ಮನಕೆ
ಅಣಕವಾಡಿ ಶಿವಧನುವ ಮುರಿದ ವಿಜಯಿಂದ್ರರಾಮ
ಮನಕೆ ಹರುಷವಪ್ಪಂತೆ ೪

## ಝುಂಪೆ ತಾಳ

ಇವನರ್ಭಕನೆ ಇವನ ಮುನಿಗಳಾದವರೆಲ್ಲ ಮನದಿ
ಭಾವಿಸಿ ಕಾಣುದೆಂಬುದರಿಯಾ ಎಲೆ ರಮಣಿ
ಭುವನ ಪಾವನ ನಾಮ ಸಿರಿ ವಿಜಯೀಂದ್ರರಾಮ
ರಾಮ ಮನದಿ ಭಾವಿಸಿ ೫

## ತ್ರಿವಿಡಿ ತಾಳ

ರಾಮ ಜಾನಕಿಯ ಮದುವೆಯ ಆಗಿ ಬಾವಾಗ ಪರಶು
ರಾಮನಿದಿರಿಸಿ ಅವನ ಬಿಲ್ಲನೇರಿಸಿ ಮೆರೆದ
ರಾಮನಿದಿರಿಸಿ ಶ್ಯಾಮಲಾಂಗ ವಿಜಯೀಂದ್ರ
ರಾಮ ಬಾಲಕನೆ ಹೇಳಾ ೬

## ಅಟ್ಟ ತಾಳ

ನೊಸಲಲ್ಲಿ ಕಣ್ಣು ಪಡೆದವನ ಗೆಲಿದೆ
ಅಸುಳೆಯೆಂದು ಬೇಡಿಕೊಂಡ ಕಂದನ ಕಾಯ್ದೆ
ಅಸುಳೆಯೆಂದ ಸುರರ ಪೊರೆವೆ ವಿಜಯಿಂದ್ರರಾಮ ೭

### ಆದಿ ತಾಳ

ಉರವಣಿಸಿ ಬಾಹ ತಾಟಕಿಯ ಮಹಾ
ಕರಗಳ ನಿಮಿಷದಿ ಕತ್ತರಿಸುವೆನೆಂದು
ಕರಗಳ ಕಡಿದ ವಿಜಯೀಂದ್ರರಾಮ
ಸರಸಿಜಾಸನ ವಿನುತ ಸಿರಿ - ಮೂಲರಾಮ ೭

### ಜತೆ

ಲೋಕಾಭಿರಾಮ ಶುಭಗುಣ ಭೌಮ
ಲೋಕೇಶ ಭೌಮ ವಿಜಯೀಂದ್ರರಾಮ ೮

■ ■ ■

## ಶ್ರೀ ರಾಘವೇಂದ್ರ ವಿರಚಿತ

### 5

**ಇಂದು ಎನಗೆ ಗೋವಿಂದ ನಿನ್ನ ಪಾದಾರ-**
ವಿಂದವ ತೋರೋ ಮುಕುಂದ ಪ.
ಸುಂದರ ವದನನೆ ನಂದಗೋಪನ ಕಂದ
ಮಂದರೋದ್ಧರ ಆನಂದ ಇಂದಿರಾರಮಣ ಅ.ಪ.

ನೊಂದೆನಯ್ಯ ಭವಬಂಧನದೊಳು ಸಿಲುಕಿ
ಮುಂದೆ ದಾರಿ ಕಾಣದೆ ಕುಂದಿದೆ ಜಗದೊಳು
ಕಂದನು ಎಂದೆನ್ನ ಕುಂದುಗಳೆಣಿಸದೆ
ತಂದೆ ಕಾಯೊ ಕೃಷ್ಣ ಕಂದರ್ಪಜನಕ ೧

ಮೂಢತನದಿ ಬಹು ಹೇಡಿ ಜೀವ ನಾನಾಗಿ
ದೃಢಭಕುತಿಯನು ಮಾಡಲಿಲ್ಲವೊ ಹರಿಯೆ
ನೋಡಲಿಲ್ಲವೊ ನಿನ್ನ ಪಾಡಲಿಲ್ಲವೊ ಮಹಿಮೆ
ಗಾಡಿಕಾರ ಕೃಷ್ಣ ಬೇಡಿಕೊಂಬೆನೊ ನಿನ್ನ ೨

ಧಾರುಣಿಯೊಳು ಭೂಭಾರಜೀವ ನಾನಾಗಿ
ದಾರಿತಪ್ಪಿ ನಡೆದೆ ಸೇರಿದೆ ಕುಜನರ
ಆರೂ ಕಾಯುವರಿಲ್ಲ ಸೇರಿದೆ ನಿನಗಯ್ಯಾ
ಧೀರವೇಣುಗೋಪಾಲ ಪಾರಗಾಣಿಸೊ ಹರಿಯೆ ೩

■ ■ ■

## ಶ್ರೀ ವಾದೀಂದ್ರ ವಿರಚಿತ
## 6

**[ರಾಗ : ಕಲ್ಯಾಣಿ, ತಾಳ - ಝಂಪೆ]**

ಮುನ್ನೇನು ಸುಕೃತವ ಮುದದಿ ರಚಿಸಿದೆನೋ
ನಿನ್ನನರ್ಚಿಸಲಾದೆನೋ ಪ

ಸನ್ನುತ ಶುಭಗುಣಸಂದೋಹ ರಘುಕುಲ
ರನ್ನ ಮಹಿತ ಮೂಲರಾಮಚಂದ್ರನೆ ನಾನು ಅ.ಪ.

ಗಂಗಾದಿ ಶುಭ ತೀರ್ಥಗಳು ಮರತಾರು ತಿಂಗಳು ಧರಿಸಿದೆನೋ
ಮಂಗಳವನು ನಮಗೆ ಮನ್ನಿಸಿಕೊಡುವ ಶ್ರೀರಂಗಾದಿಗಳಲ್ಲಿದ್ದೆನೋ
ಶೃಂಗಾರನಿಧಿಯಾದ ಸಿರಿದೇವಿಯರಸ ನಿಮ್ಮಂಗವ ಭಜಿಸಿದ್ದೆನೋ
ಹಿಂಗದ ಹರಿಗುರು ಹಿರಿಯರ ಪದಾಂಭೋಜ
ಸಂಗತಿಯನು ಬಲು ಸಂಪಾದಿಸಿದ್ದೆನೋ ಹ್ಯಾಗೋ ೧

ಪರಿಪರಿಯಲಿ ಬಂದ ಪಾತ್ರರಲ್ಲುಚಿತವ
ನರಿತು ವಾಂಛಿತವಿತ್ತೆನೊ
ಪರಿಮೆಯಿಲ್ಲದೆ ವಾಜಿಪೇಯಾದಿ ಮಖದಿಂದ
ಧರೆಯಲಿ ಯಜಿಸಿದ್ದೆನೋ
ಹರಿಕಥೆಗಳ ಕೇಳಿ ಹಸನಾಗಿ ಮನದಲ್ಲಿ ಧರಿಸಿ ಹರುಷದಲ್ಲಿದ್ದೆನೋ
ವರ ತಪೋವನದಲಿ ವರ್ತಿಸಿ ಹೃದಯದಲಿ
ಚಿರಕಾಲದಿ ನಿನ್ನ ಚಿಂತಿಸಿದ್ದೆನೋ ಹ್ಯಾಗೋ ೨

ಆ ದೇಶಿಕಾಶ್ರಮದಾರ್ಯೋದಿತಮತ ಭೇದವನರಿತಿದ್ದೆನೋ
ವೇದಮೂರುತಿ ರಾಘವೇಂದ್ರದೇಶಿಕರ ಶ್ರೀಪಾದವನ ಪಿಡಿದಿದ್ದೆನೋ
ಉದಾರ ಗುರು ಉಪೇಂದ್ರ ಉತ್ತಮ ಗುಣವುಳ್ಳ
ಮೋದವ ಪಡೆದಿದ್ದೆನೋ
ವಾದೀಂದ್ರ ಯತಿಕುಲವರಿಯನಾಳುವ ನಿಮ್ಮ
ಸಾದರ ಭಜನೆಯ ಸಾಧಿಸಿದ್ದೆನೋ ಹ್ಯಾಗೋ ೩

■ ■ ■

## ಶ್ರೀ ವಾದೀಂದ್ರ ವಿರಚಿತ

## 7

[ರಾಗ : ಕಾಂಬೋದಿ ತಾಳ - ಝಂಪೆ]

ಮೂಲರಾಮನ ದಿವ್ಯಮೂರುತಿ ಅರ್ಚಿಸಲೆನ್ನ
ಮೇಲುಮೇಲೆಂಬೆನಯ್ಯ
ಶೀಲದಿಂದಿಳೆಯಲ್ಲಿ ಶಿವನ ಪೂಜಿಸಪೂರ್ವ । ಶಿಷ್ಟಾರ್ಚನೆಮಾಡುವ
ಚಲುವ ಪ

ಆದಿಯಲಿ ಅಜನಾಜ್ಞೆಯಿಂದ ದೇವರಬಡಿಗ್ಯಾ। ಅದರರದಿನಿರ್ಮಿಸಿದ
ವೇದಗರ್ಭನು ತನ್ನ ಗೇಹದಲ್ಲಿ ಭಕುತಿಯೋಗದಿಂದರ್ಚಿಸಿದ
ಮೋದದಿಂದಿಕ್ಷ್ವಾಕು ರಾಯ ಪಾಲಿಸಿದ
ಮೇದಿನೀಪತಿಗಳಲ್ಲಮಿತ ವೈಭವದಿಂದ ಮೆರೆದ ಸಂತೋಷದಾ
ಚಲುವ ೧

ದಾಶರಥಿ ಜಾಂಬುವಂತಗೆ ಹರುಷದಿ ಕೊಡಲು। ದಾಸನೆಂದವನ
ಪೊರೆದ
ಕೋಶದೊಳ್ಗಜಪತಿಗಳ ನರಸಿ ನರಹರಿಮುನಿ ಕೊಂಡುಬರಲಂದು
ಮೆರೆದ
ದೇಶಿಕಾನಂದತೀರ್ಥಾರ್ಯರರ್ಚಿಸಿ ತಮ್ಮ ದೇವರೆಂದಾಗ ಕರೆದ

ಈತನೆಂದಿವನ ಕುಲವಂತ (ಕರಿಚಿಸಿಲವರಾ?)
ಭೇಷ್ಟಗಳ ತಂದುಸುರಿದಾ ಚೆಲುವ ೨

ವಸುತ ವಿಬುಧೇದರವಶಾಬ್ಧಿ ಪೂರ್ಣವಿದುಬಿಂಬುನೆನಿಸುತಿಪ
ಮುನಿಕುಲೋತತಮರಾಘೇಂದ್ರರಿಷ್ಟಗಳನು ಮುದದಿಂದ
ರಚಿಸುತಿಹ
ಅನುದಿನವು ಸನ್ನುತೋಪೇಂದ್ರರಾಯರ ಮತವನನುಸರಿಸಿ
ನಡೆಯುತಿವ
ಘನ್ನಭಕುತ ವಾದೀಂದ್ರಯತಿ ಮನೋರಥವನ್ನ ಘಟನೆಯನು
ಮಾಡುತಿಹ ಚೆಲುವ ೩

■ ■ ■

## ಶ್ರೀ ವರದೇಂದ್ರ ವಿರಚಿತ
## 8
## ಪ್ರಾಕೃತ ತಂತ್ರಸಾರ

[ರಾಗ : ಮಧ್ಯಮಾವತೀ, ತಾಳ - ಝಂಪೆ]

ಪಾಹಿ ಪಂಕೇರುಹೇಕ್ಷಣ ಸರ್ವಕಾಮದ
ಪಾಹಿ ಪದ್ಮಾಲಯನಿಕೇತನ ಸದಾ ಪಲ್ಲ
ಜಯತು ಚತುರಾನನಭವೇಂದ್ರಾದಿ ವಿನುತ
ಜಯತು ಚತುರಾನನ ರಮಾವಲ್ಲಭಾ
ಜಯತು ಸಂಪೂರ್ಣಚಿತ್ಸುಖಮುಖ ಸುಗುಣನಿಲಯ
ಜಯತು ಜನ್ಮಾದಿಕಾರಣ ದೋಷಹಾ ೧

ಕಮಲಾಕ್ಷ ಪರಮ ಸಂಭ್ರಮದಿಂದ ಲಕುಮಿ ಕರಕಮಲದಿಂ
ಸೇವೆಗೊಳುತಿರಲು ಆಗ । ಅಮರನಿಕರಾರಾಧ್ಯ
ಕಮಲಾಸನನು ಬಂದು ನಮಿಸಿ ಬಿನ್ನೈಸಿದನು ತನ್ನ ಪಿತಗೆ ೨

ಆವ ದೇವೋತ್ತಮನು ಆವಾವ ಗುಣಗಳಿಹವಾವಾವ ಶಬ್ದವಾಚ್ಯಾವರೀತಿ।
ಈ ವಿಚಾರವನು ಪೇಳೆನಲು ನಸುನಗುತ ರಾಜೀವಸಂಭವಗೆ
ಇಂತೆಂದು ನುಡಿದಾ ೩

ವನಜಸಂಭವ ಕೇಳು ನಾನೇ ಸರ್ವೋತ್ತಮನು
ಯನಗನಂತಾನಂತ ಮಂಗಳಗುಣ।
ಪ್ರಣವವಾಚ್ಯನು ನಾನು ಅಷ್ಟವರ್ಣೋಪೇತ ಪ್ರಣವನದ
ವಿಚಾರವನು ಪೇಳ್ವೆ ನಿನಗೆ ೪

ಸಾದರದಿ ಕೇಳಿನ್ನು ಆಕಾರ ಉಕಾರ ಮಕಾರ ನಾದ ಬಿಂದೂ
ಘೋಷ ಶಾಂತಾತಿಶಾಂತ
ಈ ದಿವ್ಯ ವರ್ಣದಲಿ ವಿಶ್ವತೈಜಸಪ್ರಾಜ್ಞ ಮೋದಮಯ
ತುರ್ಯಾತ್ಮ ಅಂತರಾತ್ಮ ೫

ಪರಮಾತ್ಮ ಜ್ಞಾನಾತ್ಮನೆಂಬಷ್ಟರೂಪದಿಂದಿರುತಿಹೆನು
ವೇದಾದಿಯಲಿ ಸರ್ವದಾ ಪರಮ ಋಷಿಗಳು ಈ ಮಹಾಮಂತ್ರ
ಜಪಿಸೆನ್ನ ಪುರವನ್ನೈದುವರು ಸತ್ವರದಿಂದಲೀ ೬

ವಾರಿರುಹಸಂಭವನೇ ಕೇಳಕಾರದಲಿ ಹದಿನಾರು ಅಚ್ಚುಗಳು ಜನಿಸಿದವು ಕ್ರಮದಿ
ಚಾರು, ಅಜ, ಆನಂದ ಇಂದ್ರೇಶ ಮೊದಲಾದ ಈರೆಂಟು
ಮೂರ್ತಿಗಳು ವಿಶ್ವಜನಿತಾ ೭

ಉಮ ನಾದ ಬಿಂದು ಘೋಷಗಳಿಂದ ಕಚಟತಪ ವಿಮಲವರ್ಗಗಳು
ಪುಟ್ಟಿದವು ಐದು । ಕಮಲಸಂಭವ ಕೇಳು
ತೈಜಸ ಪ್ರಾಜ್ಞ ತುರ್ಯಾತ್ಮಾಂತರಾತ್ಮಮೂರ್ತಿಗಳಿಂದಲೀ ೮

ಪಂಚವಿಂಶತಿರೂಪ ಅಭಿವ್ಯಕ್ತವಾದವು ವಿರಿಂಚಿ ಕೇಳ್
ಶಾಂತದಿಂ ಯರಲವಗಳೂ । ಸಂಚಿಂತಿಸುವುದು ಅತಿ
ಶಾಂತದಿಂ ಶಷಸಹಳ ಪಂಚಾಕ್ಷರಂಗಳು ಜನಿಸಿದವು ಇಲ್ಲಿ ೯

ಪರಮಾತ್ಮ ಜ್ಞಾನಾತ್ಮರೂಪದಿಂದೊಭತ್ತು ನಿರುಪಮಸ್ವಮೂರ್ತಿಗಳು
ಶೋಭಿಸಿದವು। ಪರಮೇಷ್ಠಿ ನಾರಾಯಣಾಷ್ಟಾಕ್ಷರಾಮಂತ್ರ ಪೊರೆವೆ ನಿನಗಾನು
ಸಾಂಗೋಪಾಂಗದಿಂ ೧೦

ತಾರಗತ ಅಷ್ಟವರ್ಣಗಳಿಂದ ಓಂ ನಮೋ ನಾರಾಯಣಾಯ ಎಂಬೀ ಮಂತ್ರವು।
ಚಾರು ಅಷ್ಟಾರ್ಣ ತದ್ವಾಚ್ಯ ಮೂರ್ತಿಗಳುಂಟು ಸಾರ ವಿಶ್ವಾದಿ ಪ್ರಣವಸ್ಥ ಭಿನ್ನ ೧೧

ಓಂ ಭೂಃ ಓಂ ಭುವಃ ಓಂ ಸುವಃ ಓಂ ಎಂಬ ಓಂಭೂರ್ಭುವಸ್ಸುವಃ ಈ ವ್ಯಾಹೃತೀ॥
ಅಂಬುಜೋದ್ಭವ ಪ್ರಣವಾದಿ ನಾಲ್ವರ್ಣದಿಂದ ಸಂಭವಿಸಿತೀ ಮಂತ್ರ ಸುಲಭದಿಂದಾ ೧೨

ತನಯ ಕೇಳೀ ಮಂತ್ರಗತ ನಾಲ್ಕು ರೂಪಗಳು ಅನಿರುದ್ಧ ಪ್ರದ್ಯುಮ್ನ ಸಂಕರ್ಷಣಾ। ಅನಘ
ಶ್ರೀ ವಾಸುದೇವನ ಮೂರ್ತಿಗಳನು ಚಿಂತನೆ ಮಾಡು ಈ ವ್ಯಾಹೃತಿಯಲಿ ಬಿಡದೇ ೧೩

ನಿಗಮಾದಿ ಮೊದಲು ನಾಲ್ವರ್ಣದಿಂ ಓಂ ನಮೋ ಭಗವತೇ ವಾಸುದೇವಾಯ ಯೆಂಬ।
ಯುಗಳ ಆರಕ್ಷರಾತ್ಮಕ ಮಂತ್ರಪ್ರತಿಪಾದ್ಯನಾ ಭಗವದ್ರೂಪಗಳ ಪೇಳ್ವೆ ನಾ ನಿನಗೆ ೧೪

ಕೇಶವ ನಾರಾಯಣನು ಮಾಧವನು ಗೋವಿಂದ ಕ್ಲೇಶನಾಶನ ವಿಷ್ಣು ಮಧುಸೂದನಾ। ಶ್ರೀಶ
ತ್ರಿವಿಕ್ರಮನು ವಾಮನ ಶ್ರೀಧರ ಹೃಷಿಕೇಶಾಂಬುರುಹನಾಭ ದಾಮೋದರಾ ೧೫

ತ್ರಿತಯ ಆವರ್ತಿ ಅಷ್ಟಾರ್ಣದಿಂ ಮೂರು ವ್ಯಾಹೃತಿಯಿಂದ ದ್ವಿಷಡಕ್ಷರೆರಡರಿಂದ। ಚತುರಾಸ್ಯ
ಕೇಳು ಗಾಯತ್ರಿ ಉತ್ಪನ್ನವಾಯಿತು ಕೇಶವಾದಿ ಕೃಷ್ಣಾಂತರೂಪಾ ೧೬

ವಿತತವಾದುದು ಪುರುಷಸೂಕ್ತ ಗಾಯತ್ರಿಯಿಂದತಿಶಯದಿ ಪುರುಷಸೂಕ್ತದಲಿ ವೇದ।
ತತಿಗಳುದಿಸಿದವು ನಿಗಮಾದಿ ಬ್ರಹ್ಮಸೂತ್ರ ಭಾರತ ಪಂಚರಾತ್ರಾದಿ ಆಗಮಗಳು ೧೭

ಶತಕೋಟಿ ಮೂಲರಾಮಾಯಣ ಪುರಾಣಗಳು ಸ್ಮೃತಿಸಮೂಹಗಳು- ಪಪುರಾಣಗಳು। ಇತರ
ವೈದಿಕಸೂಕ್ತ ಶಬ್ದ (ವೇದೋಕ್ತ ಶಬ್ದ) ಜನಿಸಿದವು ಸಂತತವಾಚ್ಯ ನಾನೇ ಸಂದೇಹವಿಲ್ಲ ೧೮

ಉದಯಿಸುವ ರವಿಯವೋಲ್ಕಾಂತಿ ಜ್ಞಾನಾನಂದ ಮೊದಲಾದ ದಿವ್ಯ ಗುಣಮಯ ಶರೀರಾ।
ಸುದರುಶನದರಗದಾಂಬುಜಗಳಾಯುಧವೆನಗೆ ತ್ರಿದಶಗುಣಮಯನು ಸರ್ವೇಶ ನಾನು ೧೯

ಈ ದಿಶೆಯನ್ನೆಲ್ಲ ಸೇವಿಪರು ಶ್ರೀ ಭೂದೇವಿ ಕೃದ್ಧೋಲ್ಕ ವಿಶ್ವಕೇಶವ ವಾತ್ಸ್ಯಾದಿ। ಮದ್ರೂಪಗಣಮಧ್ಯಗನು ನಾನು ಬ್ರಹ್ಮಫಣಿಪಾದ್ಯ ರತಿಭಕ್ತಿ ಸೇವ್ಯನು ಸಮರ್ಥ ೨೦

ಅರಿದರವರಾಭಯಾಂಕಿತ, ಚತುರ್ಭುಜನು ನಾಲ್ಕೆರಡು ರೂಪಂಗಳು ಪ್ರದೀಪವರ್ಣ। ಸರುವಾಭರಣಭೂಷಿತವಾದ ಮದ್ರೂಪ ನಿರುತಮೇಯವು ಮುಮುಕ್ಷುಗಳಿಂದಲಿ ೨೧

ತಾರ ನಾರಾಯಣಾಷ್ಟಾಕ್ಷರವು ವ್ಯಾಹೃತಿಯು ಈರಾರುವರ್ಣ ಗಾಯತ್ರಿಮಂತ್ರ। ಸಾರಮಾತೃ ಪುರುಷಸೂಕ್ತ ವೈಷ್ಣವಗಳಿವು ನೀರಜಾಸನ ಕೇಳು ಮಹಮಂತ್ರವು ೨೨

ಸೀತಾರಮಣ ಮೂಲರಾಮನತಿಹರುಷದಿ ವಿಧಾತಗುಪದೇಶಿಸಿದ ಈ ತೆರದಲಿ। ಪ್ರೀತಿಯಿಂದಲಿ ನಿರಂತರದಲಿದ ಪಠಿಸೆ ಶೇಷಾತಪತ್ರನು ಕಾಮಿತಾರ್ಥವೀವ(ಪ್ರೀತಿಯಿಂದಲಿ ದ್ವಾದಶಾವರ್ತಿ ಪಡಿಸಲು ವಿಧಾತಪಿತನು ಕಾಮಿತಾರ್ಥವೀವ) ೨೩

ಭಾಗ್ಯವಾಟದ ರಂಗನೊಲಿದ ಶ್ರೀನರಸಿಂಹ ಭಾಗವತರಣುಗ ಜಗನ್ನಾಥದಾಸ। ಬಾಗಿ ವಿಜ್ಞಾಪಿಸಲು ಕೈಕೊಂಡು ಪರಮಾನುರಾಗದಲಿ ಪೇಳಿದೆವು ತಂತ್ರಸಾರ ೨೪

ಕರುಣಾಬ್ಧಿ ವಸುಧೇಂದ್ರರಾಯರ ಕೃಪಾಬಲದಿ ವಿರಚಿಸಿದೆವೀ ಗ್ರಂಥ ಪದರೂಪದಿ। ಅರಸಿಕನು ನಿಂದಿಸಲು ಕುಂದಾವುದಿದಕೆ ಭಾಸ್ಕರನುದಯ ಘೂಕ ದೂಷಿಸಿದ ತೆರದಿ ೨೫

ಧರ್ಮಾರ್ಥಕಾಮಮೋಕ್ಷಗಳೀವ ಗ್ರಂಥವಿದು ನಿರ್ಮಾಣ ಮಾಡಿಸಿದ ರಾಮಚಂದ್ರ । ಹೇಮಗರ್ಭಗೆ(ಭರ್ಮಗರ್ಭಗೆ) ಒಲಿದು ಪೇಳಿದ ಮಹಾಮಂತ್ರ ಮರ್ಮಗಳನರಿತು ಭಜಿಸುವನೆ ಧನ್ಯ ೨೬

ವರದೇಂದ್ರಮುನಿರಚಿತ ಈ ತಂತ್ರಸಾರವನು ಬರೆದೋದಿ ಕೇಳಿ ಮೋದಿಸುವ ಜನರ । ವರಮೂಲರಾಮವೇದವ್ಯಾಸರಿಹಪರದಿ ಕರುಣಿಪರು ಬೇಡಿದಿಷ್ಟಾರ್ಥಗಳನು ೨೭

ಮಂಗಳಂ ರಮಾಪತಿಗೆ ಮಂಗಳಂ ದ್ರುಹಿಣಪಿತಗೆ ಮಂಗಳಂ ದಶಪ್ರಮತಿಮುನಿಮಾನ್ಯಗೆ। ಮಂಗಳಂ ಶಿವೇಂದ್ರಾದಿ ಸುರನಿಕರಪೂಜ್ಯನಿಗೆ ಮಂಗಳಂ ಜಗದ್ವಿಲಕ್ಷಣರೂಪಗೆ ೨೮

ಇಪ್ಪತ್ತರೊಂಭತ್ತು ಪದಗಳೆಂಬತಿವಿಮಲ ಪುಷ್ಪಮಾಲಿಕೆ ಮೂಲರಾಮನಡಿಗೆ। ಅರ್ಪಿಸಿದೆವೀ ಸುಮನಧಾಮವನುದಿನದಲ್ಲಿ ವಪ್ಪದಿಹದೇ ಬುಧರ ಮಸ್ತಕದಲಿ ೨೯

॥ತಿ ಶ್ರೀವರದೇಂದ್ರತೀರ್ಥಪೂಜ್ಯಚರಣಕೃತ

ಪ್ರಾಕೃತತಂತ್ರಸಾರಂ ಸಂಪೂರ್ಣಂ ಶ್ರೀಕೃಷ್ಣಾರ್ಪಣಮಸ್ತು॥

ಅನುಬಂಧ ೨

# ಯತಿವರ್ಯರ ಮೇಲೆ ಹರಿದಾಸರು ರಚಿಸಿದ ಹೆಚ್ಚಿನ ಹಾಡುಗಳು

| ಶೀರ್ಷಿಕೆ | ರಚಯಿತರು |
|---|---|

### ಶ್ರೀ ಜಿತಾಮಿತ್ರರು

| | |
|---|---|
| ಕಾಯೊ ಜಿತಾಮಿತ್ರ ಯತಿಕುಲ ನಾಯಕ ಸುಚರಿತ್ರ | ಶಾಮಸುಂದರ |

### ಶ್ರೀ ವಿಜಯೀಂದ್ರರು

| | |
|---|---|
| ಎದುರ್ಯಾರೊ ಯತಿಗೆ ಸಮನ್ಯಾರೊ | ಜಯನರಸಿಂಹ |
| ಜಯ ಜಯ ಯತಿರಾಜ ಜಯ ವಿಜಯೀಂದ್ರ | ಪ್ರಸನ್ನ ಶ್ರೀನಿವಾಸ |

### ಶ್ರೀ ಸುಧೀಂದ್ರರು

| | |
|---|---|
| ಶ್ರೀ ಸುಧೀಂದ್ರತೀರ್ಥ ಯತಿರಾಜಚರಣ | ಪ್ರಸನ್ನ ಶ್ರೀನಿವಾಸ |

### ಶ್ರೀ ವಾದೀಂದ್ರರು

| | |
|---|---|
| ನಸುನಗಿಯ ಮೊಗ ಪಸರಿಸಿದ | ವಿಜಯವಿಠಲ |
| ವಾದೀಂದ್ರಗುರುಗಳ ನೀ ಭಜಿಸೂ | ಲಕುಮೀಶ |

### ಶ್ರೀ ವಸುಧೇಂದ್ರರು

| | |
|---|---|
| ಮಂಗಳಂ ಗುರು ವಸುಧೇಂದ್ರರಿಗೆ | ಜಗನ್ನಾಥವಿಠಲ |
| ತುಂಗಾತೀರದಿ ಕಂಗೊಳಿಸುವ ಮುನಿಪುಂಗವ | ಲಕುಮೀಶ |

### ಶ್ರೀ ರಾಘವೇಂದ್ರರು

(ಗುರು ಸಾರ್ವಭೌಮರ ಮೇಲಿನ ಹಾಡುಗಳ ಸಂಕಲನಗಳು ಹಲವಾರು ಇವೆ. ಮುಖ್ಯವಾಗಿ ಶ್ರೀ ಮಂತ್ರಾಲಯ ಮಠದವರ ಹಾಗೂ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಇವರ ಪ್ರಕಟನೆಗಳನ್ನು ನೋಡಬೇಕು)

### ಶ್ರೀ ವರದೇಂದ್ರರು

| | |
|---|---|
| ಗುರುರಾಯ ಗುರುರಾಯ ತರುಣ ತರಣಿ ಸುಪ್ರಕಾಶಕಿರಣ | ಜಗನ್ನಾಥ ವಿಠಲ |
| ವರದೇಂದ್ರ ಮುನಿಪ ದಿಕ್ಪತಿಗಳಂತೆ ಪರಮ ಸಂಭ್ರಮದಿ | " |
| ಬಂದಾ ಯತಿವರದೇಂದ್ರ ಮುನಿವರ | " |

| | |
|---|---|
| ಗುರುರಾಯ ಗುರುರಾಯ ತರಣಿ ಪ್ರಕಾಶ | ಪ್ರಾಣೇಶವಿಠಲ |
| ಗುರುವರದೇಂದ್ರ ದಯಾಂಬುಧೇ | " |
| ಗುರುವೇ ಶ್ರೀ ವಸುಧೇಂದ್ರ ಕರಸಂಜಾತ | " |
| ಜಯಮಂಗಳಂ ನಿತ್ಯ ಶುಭಮಂಗಳಂ | " |
| ತುತಿಸಲಳವೇ ಶ್ರೀ ವರದೇಂದ್ರನಾ | " |
| ಮಂಗಳಂ ......... ಭುವನೇಂದ್ರ ಪೂಜ್ಯ ಪದಾಬ್ಜ | " |
| ಪಾಲಿಸೊ ಪಾಲಿಸೊ ಕರುಣಾಲಯ | " |
| ವಂದನೆ ಮಾಡಿರೈ ಗುರು ವರದೇಂದ್ರನ ಪಾಡಿರೈ | " |
| ಶರಣು, ನಿತ್ಯಾನಂದ ಸದ್ಗುಣ ಸಾಂದ್ರ | " |
| | |
| ರಥವನೇರಿದ ಯತಿಕುಲನಾಥ ಸದ್ಗುಣ | ಗುರುಜಗನ್ನಾಥ ವಿಠಲ |
| ಸೀರಜಧವಪದ ವಾರಿಜಯುಗ ....... ವರದೇಂದ್ರ | " |
| ಅಂದಣೇರಿದ ವರದೇಂದ್ರ ಮುನಿವರ | ವರದೇಶ ವಿಠಲ |
| ಮಂಗಳಂ ಮಂಗಳಂ ಭವತು | ಶ್ರೀಶಪ್ರಾಣೇಶ ವಿಠಲ |
| ವರದೇಂದ್ರರು ಸುಂದರ ರಥದೊಳು | ಅಭಿನವಪ್ರಾಣೇಶ ವಿಠಲ |
| ವರದೇಂದ್ರ ವರದೇಂದ್ರ ವರದಾಯಕ | " |
| ದುರಿತ ಕದಳಿವನದ್ವಿರದಿ | ಶಾಮಸುಂದರ |
| ವರದೇಂದ್ರ ಯತಿಸಾರ್ವಭೌಮ ಸಲಹೊ ಎನ್ನಾ | ಲಕುಮೀಶ |
| ವರದೇಂದ್ರ ತೀರ್ಥಾರ್ಯ ಗುರುವರರ ಪದಯುಗ್ಮ | " |
| ಶ್ರೀ ವರದೇಂದ್ರ ತೀರ್ಥಾರ್ಯ ಗುರುವರರ | ಪ್ರಸನ್ನ ಶ್ರೀನಿವಾಸ |

## ಶ್ರೀ ಧೀರೇಂದ್ರರು

| | |
|---|---|
| ದಾರಿ ತೋರಬಾರದೇನೋ ಶ್ರೀಹರಿ | ತಂದೆ ಶ್ರೀ ನರಹರಿ |
| ಧೀರೇಂದ್ರಾ ಧೀರೇಂದ್ರಾ ಸಾರಿದ ಭಕುತರ | ವರದವಿಠಲ |
| ಧೀರೇಂದ್ರ ಗುರುರಾಯಾ ಸಂಸಾರಾಬ್ಧಿ ದಾಟಿಸಯ್ಯ | ವರದಶ್ರೀನಿವಾಸ |
| ನೀರೆ ನೀ ನೋಡಿದ್ಯಾ ನೀರಜ ಗಂಧೆ | ರಾಜಗೋಪಾಲ |
| ವಂದಿಸುವೆ ಧೀರೇಂದ್ರ ತೀರ್ಥಾರ್ಯ | ಪ್ರಸನ್ನ ಶ್ರೀನಿವಾಸ |
| ವರದಾ ತೀರದಿ ಮೆರೆವ ಶ್ರೀಗುರು | ಲಕುಮೀಶ |

## ಶ್ರೀ ಭುವನೇಂದ್ರರು

| | |
|---|---|
| ಕೃತಕೃತ್ಯನಾದೆನಿಂದಿನ ದಿನದಲಿ | ಜಗನ್ನಾಥವಿಠಲ |
| ಭುವನೇಂದ್ರ ಮುನಿಪ ನಿನ್ನವನೊ | " |
| ಶ್ರೀಮಧ್ವಮತವೆಂಬ ಕ್ಷೀರಪಾರಾವರ | ಪ್ರಾಣೇಶವಿಠಲ |
| ಭುವನೇಂದ್ರ ಯತಿಪದವಾ ಸತತ ಭಜಿಪಗೆ | ಲಕುಮೀಶ |

## ಶ್ರೀ ಸುಬೋಧೇಂದ್ರರು

| | |
|---|---|
| ಅಭಯವೀಗಲ್ ಬೇಡೆ ಗುರು ಸುಬೋಧೇಂದ್ರಾರ್ಯರ | ಪ್ರಾಣೇಶ ವಿಠಲ |

## ಶ್ರೀ ಸುಶೀಲೇಂದ್ರರು

| | |
|---|---|
| ಚಂದ್ರನ ನೋಡಿರೈ ಶ್ರೀ ಸುಶೀಲೇಂದ್ರನ ಪಾಡಿರೈ | ಶ್ಯಾಮಸುಂದರ |
| ದಾನಿಗಳೊಳು ಪ್ರತಿಗಾಣೆನೊ ನಿನಗೆ ಸನ್ಮಾನಿ | " |
| ದೈಶಿಕನಾಥಾ ಶ್ರೀ ಸುಶೀಲೇಂದ್ರಗುರೂ | " |
| ನಮೋನಮೋ ಶ್ರೀ ಸುಶೀಲೇಂದ್ರ | " |
| ಪಾಲಯ ಮಾಂ ಸುಶೀಲೇಂದ್ರ | " |
| ಪೊಂದಿ ಭಜಿಸು ಸುಶೀಲೇಂದ್ರರ | " |
| ವರ್ಣಿಸಲು ಸಾಧ್ಯವೆ ಧರೆಯೊಳಿನ್ನು | " |
| ಸ್ಮರಿಸು ಮಾನವ ನಿರುತ ಶ್ರೀ ಸುಶೀಲೇಂದ್ರತೀರ್ಥರ | " |
| ಸುಶರಣರ ಸುರಪಾದಪ | " |
| ಸುಶೀಲೇಂದ್ರ ಸುಶೀಲೇಂದ್ರ ಅಸುನಾಯಕಮತ.... | " |
| ಸೂರ್ಯ ಯತಿವರ್ಯ ಮಧ್ವಾರ್ಯರ | ಶ್ಯಾಮಸುಂದರ |
| ಜಯಮಂಗಳಂ...... ದಯಪಯೋನಿಧಿ | " |
| ಪಾಲಯ ಮಾಂ ಸುಶೀಲೇಂದ್ರ | " |
| ಮಂಗಳಂ ... ಶ್ರೀ ಸುಶೀಲೇಂದ್ರ ಸನ್ಮುನಿಪ | " |
| ನಮೋ ನಮೋ ಗುರು ಸುಶೀಲೇಂದ್ರ | " |
| ವರದಾತೀರದಿ ರಿತ್ತಿಪುರದಲಿ ಮಣಿವರು | ಲಕುಮೀಶ |

### ಶ್ರೀ ಸುವ್ರತೀಂದ್ರರು

| | |
|---|---|
| ಪೊಂದಿ ಭಜಿಸಲೊ ನಿರುತ | ಶ್ಯಾಮಸುಂದರ |
| ಕರುಣದಿ ಪಿಡಿ ಕೈಯಾ ಸುವ್ರತೀಂದ್ರ | ಲಕುಮೀಶ |

### ಶ್ರೀ ಸುಯಮೀಂದ್ರರು

| | |
|---|---|
| ಹರುಷದಿ ಪಿಡಿಕೈಯಾ ಸುಯಮೀಂದ್ರರಾಯಾ | ಲಕುಮೀಶ |

### ಶ್ರೀ ಸುಜಯೀಂದ್ರರು

| | |
|---|---|
| ತೆರಳಿದರು ತೆರಳಿದರು ಹರಿಯ ಪುರಕೆ | ಅಭಿನವಪ್ರಾಣೇಶವಿಠಲ |
| ತೆರಳಿದರು ಹರಿಪುರಕೆ ಸುಜಯೀಂದ್ರರು | ಲಕುಮೀಶ |

### ಶ್ರೀ ಸುಶಮೀಂದ್ರರು

| | |
|---|---|
| ನೋಡಿ ದಣಿಯವು ಕಂಗಳು ಶ್ರೀ ಸುಶಮೀಂದ್ರ ... | ಲಕುಮೀಶ |
| ಎಂತು ತುತಿಪೆ ನಾನು ಶ್ರೀಸುಶಮೀಂದ್ರರ | " |

*ಸೂಚನೆ : ಮೇಲಣ ಹಾಡುಗಳ ಪಠ್ಯ ಬೇಕೆನಿಸಿದವರು ಆ ಆ ದಾಸರ ಕೃತಿ ಸಂಕಲನಗಳನ್ನು ಇಲ್ಲವೆ ಸಂಬಂಧಪಟ್ಟ ಯತಿವರ್ಯರ ಚರಿತ್ರ ಪುಸ್ತಕಗಳನ್ನು ನೋಡಬಹುದು.*



ಅನುಬಂಧ ೩

## ಕುಂಭಕೋಣಂದಲ್ಲಿ

### ಶ್ರೀ ವಿಜಯೀಂದ್ರರಿಗೂ, ಅದ್ವೈತ ದಿಗ್ಗಜ ಶ್ರೀ ಅಪ್ಪಯ್ಯ ದೀಕ್ಷಿತರಿಗೂ ನಡೆದ ಸಂವಾದ ಮತ್ತು ವಾಕ್ಯಾರ್ಥದ ಮಾದರಿಗಳು

( ಒಂದು )

### ಆಶುಕವಿತಾ ರಚನೆ : 'ವನ'ವನ್ನು ಕುರಿತು

ಮಹನೀಯರಿಬ್ಬರ ಮೊದಲ ಭೇಟಿಯ ಜಯಾಪಜಯಗಳನ್ನರಿಯುವ ಲವಲವಿಕೆಯಿಂದ ಎಲ್ಲರೂ ನಿಶ್ಶಬ್ದರಾಗಿ ನಿಂತಿದ್ದಾರೆ. ಆಶುಕವಿತೆಯಿಂದ ದೀಕ್ಷಿತರು ವನವನ್ನು ಈ ರೀತಿ ವರ್ಣಿಸಿದರು :

"ಅಸ್ತರಣ್ಯಂ ತರಣ್ಯಂಘ್ರಿ ಸರಣ್ಯಂತರ್ಧಿ ಪಾದಪಂ" ಆಂದರೆ "ಈ ವನವು ಸೂರ್ಯನ ಕಿರಣಗಳ ಮಾರ್ಗವನ್ನು ಮರೆ ಮಾಡುವ ಗಗನಚುಂಬಿಗಳಾದ ಸಾಂದ್ರವಾದ ವೃಕ್ಷಗಳಿಂದ ಶೋಭಿಸುತ್ತಿದೆ" ಎಂಬುದು ದೀಕ್ಷಿತರ ಕವಿತೆಯ ತಾತ್ಪರ್ಯ. ಆಹಾ! ಎಂತಹ ಸುಂದರ ಪದವಿನ್ಯಾಸ! ಎಷ್ಟು ಮಧುರ! ಸ್ವಭಾವೋಕ್ತಿ, ಕಾವ್ಯಲಿಂಗ, ಅನುಪ್ರಾಸ, ಶಬ್ದಾಲಂಕಾರಗಳಿಂದ ಮನಸ್ಸಿಗೆ ಆಹ್ಲಾದವನ್ನೀಯುವ ದೀಕ್ಷಿತರ ಕವಿತೆಯನ್ನಾಲಿಸಿ ಜನಸ್ತೋಮ ಮುಗ್ಧವಾಯಿತು. ದೀಕ್ಷಿತರು ಗೆಲುವು ತಮಗೇ ಸಿದ್ಧವೆಂದು ನಸುನಗುತ್ತಾ ಗರ್ವದಿಂದ ಕುಳಿತು ವಿಜಯೀಂದ್ರರ ಉತ್ತರರೂಪ ಕವಿತೆಯನ್ನಾಲಿಸಲು ಕುತೂಹಲಿಗಳಾಗಿದ್ದಾರೆ.

ಕವನ-ಕರಣ-ಧುರೀಣರಾದ ಶ್ರೀ ಅಪ್ಪಯ್ಯ ದೀಕ್ಷಿತರ ಕವನವನ್ನು ಸರಿಗಟ್ಟುವ ಕವಿತೆಯನ್ನು ರಚಿಸಬಲ್ಲರೇ ಶ್ರೀ ವಿಜಯೀಂದ್ರರು ನಾಗರಿಕರು ಸಂದೇಹಪಡುತ್ತಿರುವಂತೆಯೇ ಶ್ರೀ ವಿಜಯೀಂದ್ರರ ವದನಾರವಿಂದವೆಂಬ ರಂಗಸ್ಥಳದಿಂದ ಕಾವ್ಯ ರಮಣಿಯೇ ಒನಪು ವೈಯಾರಗಳಿಂದ ನಲಿದುಬರುತ್ತಿರುವಳೋ ಎಂಬಂತೆ ಸುರುಚಿರ ಗಂಭೀರ ಕಾವ್ಯ ವಾಹಿನಿಯು ಶ್ರೀಯವರ ಮುಖದಿಂದ ಹೊರಹೊಮ್ಮಿತು!

"ದರೀಸುಪ್ತಥುರೀದತ್ತಪರೀರಂಭಸರೀಸೃಪಂ"

ಅಂದರೆ "ಹುತ್ತದೊಳು ಪವಡಿಸಿದ, ಉರಗಿ ನೀಡಿದ ಮಧುರ ಸುಮ್ಮುದು ಆಲಿಂಗನದಿಂ ಸುಖಿಪ ಭುಜಗ ಸಮೂಹದಿಂ ವನವು ರಾಜಿಪುದು" ಶ್ರೀ ವಿಜಯೀಂದ್ರರ ಕವನಚಾತುರ್ಯವೇನೆನ್ನುವುದು? ಅಹಹ! ಎಂತಹ ಗಂಭೀರಸರಣಿ, ಎಷ್ಟು ರಸವತ್ತಾದ ವರ್ಣನೆ,

ಅದೆಂತಹ ಸರಸಭಾವ. ಜನಸಮೂಹ ಶ್ರೀಯವರ ಕವಿತೆಯನ್ನು ಕೇಳಿ ತಾವು ಹಿಂದೆಂದೂ ಕೇಳರಿಯದ ಶ್ರೀಯವರ ಕವನ ಸಾಮರ್ಥ್ಯವನ್ನರಿತು ಬೆರಗಾಗಿ ನಿಂತಿದ್ದರೆ, ಶ್ರೀ ದೀಕ್ಷಿತರ ಅನುಯಾಯಿಗಳ ಮುಖ ಬೆವರಿತು. ಶ್ರೀ ದೀಕ್ಷಿತರು ತಮ್ಮ ಕಿವಿಯನ್ನು ತಾವೇ ನಂಬಲಾರದೆ ಮರ್ಮಾಹತರಾದರು.

ಕಾವ್ಯನಾಟಕಾಲಂಕಾರಗಳಲ್ಲಿ ನಿಪುಣರಾದ ಅನೇಕ ಪಂಡಿತರು ಉಭಯರ ಕವಿತೆಗಳನ್ನು ವಿಮರ್ಶಿಸಿದರು. ಶ್ರೀ ದೀಕ್ಷಿತರ ಕವಿತೆಯಲ್ಲಿ ೧. ಅರಣ್ಯ, ೨. ತರಣಿ, ೩. ಸರಣಿ ಎಂಬ ಮೂರು ಪ್ರಾಸವಿದೆ; ವರ್ಣನೆ ಜಡಪರವಾಗಿದೆ. ಶ್ರೀ ವಿಜಯೀಂದ್ರರ ಕವಿತೆಯಲ್ಲಿ ೧. ದರೀ, ೨. ಝರೀ, ೩. ಪರೀ, ೪. ಸರೀ ಎಂಬ ನಾಲ್ಕು ಪ್ರಾಸಗಳಿವೆ! ಶ್ರೀಯವರ ವರ್ಣನೆ ಚೇತನಪರವೂ ಸ್ವರಸವೂ ಆಗಿದೆ ಎಂದು ನಿರ್ಧರಿಸಿ ಉಭಯರಲ್ಲಿಯೂ ತಮ್ಮ ಅಭಿಪ್ರಾಯವನ್ನು ನಿವೇದಿಸಿದರು. ನೆರೆದ ಜನ ಶ್ರೀ ವಿಜಯೀಂದ್ರರ ನೂತನ ಕಾವ್ಯಶಕ್ತಿಯ ಪ್ರಭಾವದಿಂದ ಸ್ಫೂರ್ತಿಗೊಂಡು "ಜಯ ಜಯ ವಿಜಯೀಂದ್ರ ಗುರುಸಾರ್ವಭೌಮ" ಎಂದು ಹರ್ಷಧ್ವನಿ ಮಾಡಿದರು.

***

ಹಿಂದಿನ ದಿನ ತಾವು ದೀಕ್ಷಿತರಿಗೆ ತಿಳಿಸಿದ್ದಂತೆಯೇ ವಿಜಯೀಂದ್ರ ಗುರುವರ್ಯರು ದೀಕ್ಷಿತರಿಗೆ ದೇವರ ದರ್ಶನಕ್ಕೆ ಬರಬೇಕೆಂದು ದೀಕ್ಷಿತರಿಗೆ ಆಹ್ವಾನವನ್ನು ಕಳುಹಿಸಿದರು. ರಜತ ದಂಡಧಾರಿಯೊಡನೆ ಶ್ರೀ ಮಠದ ಪಾರುಪತ್ಯೇಗಾರರೇ ದೀಕ್ಷಿತರು ಬಿಡಾರ ಮಾಡಿದ್ದೆಡೆಗೆ ಹೋಗಿ ಶ್ರೀಯವರ ಅಪ್ಪಣೆಯನ್ನು ನಿವೇದಿಸಿ ದೀಕ್ಷಿತರನ್ನು ಶ್ರೀಮಠಕ್ಕೆ ಬರಬೇಕೆಂದು ಮರ್ಯಾದೆಯಿಂದ ಆಹ್ವಾನಿಸಿದರು. ದೀಕ್ಷಿತರು ಆನಂದದಿಂದ ಬರುವುದಾಗಿ ತಿಳಿಸಿ ತಮ್ಮ ಶಿಷ್ಯ ಮಂಡಳಿಯೊಡನೆ ಮೇನೆಯಲ್ಲಿ ಕುಳಿತು ಮಠಕ್ಕೆ ದಯಮಾಡಿಸಿದರು.

ದೀ- ( ನಸುನಗುತ್ತಾ ) ಶ್ರೀಗಳವರ ಭೇಟಿಯಾದದ್ದು ಬಹಳ ಸಂತೋಷದ ವಿಷಯ, ಧ್ವಾಂತರೆ!* ತಮ್ಮ ಸಂಪರ್ಕದಿಂದ ಕಣ್ಣು ಮುಚ್ಚಿ ಬರುತ್ತಿದೆ!

ವಿ - (ಮುಗುಳುನಗೆಯಿಂದ) ನಿಜ ದೀಕ್ಷಿತರೆ! ಮಧ್ವ ಸೂರ್ಯನ ತಾಪದಿಂದ ಆರ್ತ (ಸ್ಮ+ಆರ್ತ=ಸ್ಮಾರ್ತ) ರಾದವರಿಗೆ ಕಣ್ಣುಮುಚ್ಚಿ ಬರುವುದು ಸ್ವಾಭಾವಿಕವಲ್ಲವೆ?

---

[ ಮಾಧ್ವ ಎಂಬ ಶಬ್ದದಲ್ಲಿ 'ಧ್ವ' ಎಂಬ ಅಕ್ಷರವು ಕೊನೆಗಿರುವುದರಿಂದ ಧ್ವಾಂತವೆಂದರೆ ಮಾಧ್ವರೆಂದು ಅರ್ಥ. ಮತ್ತೊಂದರ್ಥ - ಧ್ವಾಂತ ಎಂದರೆ ಕತ್ತಲೆ. ಆದರೆ ಈ ಧ್ವಾಂತ ಪದವನ್ನು ಆವೃತ್ತಿ ಮಾಡಿಕೊಂಡು ಸಮಾಸದಲ್ಲಿ ಧ್ವ ಮತ್ತು ಅಂತ ಎಂದು ವಿಭಾಗ ಮಾಡಿದಾಗ ಕತ್ತಲೆಯ ನಾಶಕವಾದದ್ದು ಪ್ರಕಾಶ ಎಂದರ್ಥ. ಅಂದರೆ ತೇಜಸ್ಸುಳ್ಳವರೆಂದು ಭಾವ ].

ಇದರಿಂದ ಪರಸ್ಪರ ಪರಿಚಯವು ಸ್ವಲ್ಪ ಮಟ್ಟಿಗಾದಂತಾಯಿತು! ದೀಕ್ಷಿತರು ತಾವು ರಚಿಸಿದ "ಮಧ್ವಮುಖಮರ್ದನ ( ಮಧ್ವಮತವಿಧ್ವಂಸನ ) ಎಂಬ ಗ್ರಂಥವನ್ನು ಶ್ರೀಯವರ ಮುಂದೆ ಓದಿದರು. ಶ್ರೀಗಳವರು ಕೊನೆಯ ವರೆಗೆ ಸುಮ್ಮನೆ ತಲೆದೂಗುತ್ತಾ ಕುಳಿತಿದ್ದರು. ಕೊನೆಗೆ ದೀಕ್ಷಿತರು -

"ತಥಾಪ್ಯಾನಂದತೀರ್ಥೀಯಂ ಮತಮಗ್ರಾಹ್ಯಮೇವ ನಃ।

ಯತ್ರ ವೈದಿಕಮರ್ಯಾದಾ ಭೂಯಸ್ಯಾಕುಲತಾಂ ಗತಾ॥"

"ಯಾವ ಮಧ್ವಮತದಲ್ಲಿ ವೈದಿಕ ( ವೇದಸಂಬಂಧಿ ) ಮರ್ಯಾದೆಯು ಬಹುವಾಗಿ ಉಲ್ಲಂಘಿತವಾಗಿಯೋ ಅಂತಹ ಆನಂದತೀರ್ಥರ ಮತವು ನಮಗೆ ಅಗ್ರಾಹ್ಯವೇ ಸರಿ!"ಎಂದು ಹೇಳಿ " ಇದು ಶ್ರೀಗಳವರಿಗೆ ಸಮ್ಮತವಷ್ಟೆ?" ಎಂದು ಪ್ರಶ್ನಿಸಿದರು.

ವಿ - ( ನಸುನಕ್ಕು ) ಒಂದು ಅನುಸ್ವಾರವನ್ನು ತೆಗೆದುಬಿಟ್ಟರೆ ನಮಗೆ ಒಪ್ಪಿಗೆ ಇದೆ ದೀಕ್ಷಿತರೇ!

"ತಥಾಪ್ಯಾನಂದತೀರ್ಥೀಯ! ಮತಮಗ್ರಾಹ್ಯಮೇವ ನಃ।

ಯತ್ರ ವೈದಿಕಮರ್ಯಾದಾ ಭೂಯಸ್ಯಾಕುಲತಾಂ ಗತಾ॥

ಎಂದು ಹೇಳಿಬಿಡಿ! ಅಂದರೆ ಸರಿಹೋಗುವುದು!!

ದೀಕ್ಷಿತರು ಕಕ್ಕಾಬಿಕ್ಕಿಯಾದರು. ನೆರೆದ ಪಂಡಿತರು ಚಕಿತರಾದರು. ಶ್ರೀಯವರ ಮಾತಿನ ಮರ್ಮವಿಷ್ಟೇ; 'ಆನಂದತೀರ್ಥೀಯಂ' ಎಂಬಲ್ಲಿ ಅನುಸ್ವಾರವನ್ನು ತೆಗೆದರೆ 'ಆನಂದತೀರ್ಥೀಯ!' ಎಂದು ಶ್ರೀ ವಿಜಯೀಂದ್ರರನ್ನು ಸಂಬೋಧಿಸಿದಂತಾಗುತ್ತದೆ. ಆಗ ದೀಕ್ಷಿತರ ಶ್ಲೋಕದ ತಾತ್ಪರ್ಯ ಹೀಗಾಗುವುದು - ಆನಂದತೀರ್ಥೀಯ! = ಮಧ್ವಮತಾನುಯಾಯಿಗಳಾದ ಹೇ ವಿಜಯೀಂದ್ರತೀರ್ಥರೇ! ಯತ್ರ = ಯಾವ ಅದ್ವೈತಮತದಲ್ಲಿ, ವೈದಿಕ ಮರ್ಯಾದಾ= ವೇದದ ನಿಯಮಗೌರವಗಳು, ಭೂಯಸೀ = ಹೆಚ್ಚಾಗಿ, ಅಕುಲತಾಂಗತಾ = ಅಕುಲಿತವಾಗಿದೆಯೋ, ಅಂದರೆ ಯಾವ ಮತವು ಶ್ರುತಿ ನಿಷಿದ್ಧವಾಗಿದೆಯೋ, ಅಂತಹ. ನಃ = ನಮ್ಮ, ಮತಂ = ಅದ್ವೈತಮತವು. ಅಗ್ರಾಹ್ಯಮೇವ = ಅಗ್ರಾಹ್ಯವೇ ಸರಿ.

ತಮ್ಮ ಶ್ಲೋಕದಿಂದಲೇ ತಮ್ಮನ್ನು ಖಂಡಿಸಿದ ಶ್ರೀ ವಿಜಯೀಂದ್ರರ ಪ್ರತಿಭೆ, ಚಮತ್ಕಾರಗಳನ್ನು ಕಂಡು ಬೆರಗಾಗಿ, ದೀಕ್ಷಿತರು ಶ್ರೀಗಳವರನ್ನು ನೋಡಿ ನಕ್ಕರು. ಈ ಉಭಯರ ಸರಸ- ವಿನೂತನವಾದ ವಾದಕ್ರಮವನ್ನು ಕಂಡು ಜನರು ಆಶ್ಚರ್ಯಚಕಿತರಾದರು.

■ ■ ■

(ಎರಡು)

## 'ನಾರಾಯಣ' ಶಬ್ದ ಮೀಮಾಂಸೆ

ಎರಡನೆಯ ಬಾರಿ ಪಂ. ಅಪ್ಪಯ್ಯ ದೀಕ್ಷಿತರು ಶ್ರೀಗಳವರ ಬಳಿಗೆ ಬಂದಾಗ ವಾಡಿಕೆಯಂತೆ 'ನಾರಾಯಣ' ಎಂದು ಆಶೀರ್ವದಿಸಿದರು.

ದೀ- (ಕುಳಿತುಕೊಂಡು, ತಮಾಷೆಯಾಗಿ) ಪರಶಿವಾತಿರಿಕ್ತವಾದ ಬೇರೆ ವಸ್ತುವೇ ಇಲ್ಲದಿರುವುದರಿಂದ ನೀವು 'ನಾರಾಯಣ' ಎಂದಿದ್ದು ಸರಿಯಲ್ಲ.

ಶ್ರೀ- ದೀಕ್ಷಿತರೇ 'ಪರಮಶಿವ' ವಾಚ್ಯನಾದ 'ನಾರಾಯಣ'ನು ಇರುವುದರಿಂದ ನಾವು. ಆಶೀರ್ವದಿಸಿದ್ದು ಯುಕ್ತವಾಗಿದೆ. ಇರಲಿ, ಇದೇನು ಬಹಳ ಅಪರೂಪ ದರ್ಶನ.

ದೀ- ಸ್ವಲ್ಪ ಶ್ರೀಯವರೊಡನೆ ವಾಗ್ಯುದ್ಧ ಮಾಡಿ ಕೆಲ ಸಂದೇಹಗಳನ್ನು ನಿವೃತ್ತಿ ಮಾಡಿಕೊಳ್ಳಲು ಬಂದಿದ್ದೇನೆ.

ಶ್ರೀ- ಬಹಳ ಸಂತೋಷ, ನಾರಾಯಣ ಸಮರ್ಥನಾಗಿದ್ದಾನೆ. ನಿಮ್ಮ ಸಂಶಯವೇನು?

ದೀ- (ನಗುತ್ತಾ) ನಾರಾಯಣ ಶಬ್ದವಾಚ್ಯನಾದ ಪರಶಿವನೇ ಸಮರ್ಥನಾದುದರಿಂದ ಮತ್ತು ಪರಶಿವನ ಅತಿರಿಕ್ತವಾದ ಬೇರೆ ವಸ್ತುವೇ ಇಲ್ಲದಿರುವುದರಿಂದ ನಾರಾಯಣನೆಂತು ಸಮರ್ಥನಾದಾನು?

ಶ್ರೀ- (ಮುಗುಳುನಗೆಯಿಂದ) ಓಹೋ, ದೀಕ್ಷಿತರಿಗಿಂದು ನಮ್ಮ 'ನಾರಾಯಣ'ನ ಮೇಲೆ ಕಣ್ಣು ಬಿದ್ದಂತಿದೆ. ಇಂದಿನ ವಾಕ್ಯಾರ್ಥಕ್ಕೆ 'ನಾರಾಯಣ'ನೇ ವಿಷಯನಾಗುವಂತಿದೆಯಲ್ಲ! ದೀಕ್ಷಿತರೇ, ಪರಮ ಮಂಗಳಕರನಾದುದರಿಂದ ಪರಮಶಿವವಾಚ್ಯನೂ, ನಾರಾಯಣಾದಿಶಬ್ದವಾಚ್ಯನೂ ಆದ ನಮ್ಮ ಶ್ರೀಮೂಲರಾಮ ಸಮರ್ಥನಿದ್ದಾನೆ.

ದೀ- ಶ್ರೀಗಳವರೇ, ಸಮರ್ಥನೆಂದರೆ ಸರ್ವೋತ್ತಮನೆಂದು ತಿಳಿಯಬೇಕು. ಮೋಕ್ಷ ಸಾಧನಜ್ಞಾನವಿಷಯವಾದ ಮತ್ತು ಜಗತ್ಕಾರಣವಾದ ವಸ್ತು ಯಾವುದೋ ಅದೇ ಸರ್ವೋತ್ತಮವಾದುದು. ಇದಕ್ಕೆ ತಮ್ಮ ಆಕ್ಷೇಪವಿಲ್ಲವಷ್ಟೇ?

ಶ್ರೀ - ಓಹೋ, ನಮಗದು ಪರಮ ಸಮ್ಮತ.

ದೀ- ಸರಿ, ಅಂದ ಮೇಲೆ ಪರಮಶಿವನೇ ಸರ್ವೋತ್ತಮನೆಂದು ನೀವು ಒಪ್ಪಲೇಬೇಕು. ಏಕೆಂದರೆ 'ಏಕೋ ರುದ್ರೋ ನ ದ್ವಿತೀಯೋಽವತಸ್ಥೇ', 'ನ ಸನ್ನಚಾಸಚ್ಛಿವ ಏವ ಕೇವಲಃ'

ಮುಂತಾದ ಉಪನಿಷದ್ವಾಕ್ಯಗಳಿಂದ ಶಿವನು ಜಗತ್ಕಾರಣನೆಂದು ತಿಳಿದು ಬರುತ್ತದೆ. ಅಂದ ಮೇಲೆ ಶಿವನು ಸರ್ವೋತ್ತಮನು. ಅವನಲ್ಲವೇ ಸ್ವಾಮಿ ಸಮರ್ಥ?

ಶ್ರೀ - ( ನಗುತ್ತಾ ) ಏಕೆ ದೀಕ್ಷಿತರೇ, ಅಷ್ಟು ಅವಸರ? 'ನಾರಾಯಣೋ ವಾ ಇದಮಗ್ರ ಆಸೀತ್' ಇತ್ಯಾದಿ ಶ್ರುತಿಗಳಿರುವುದರಿಂದ ನಾರಾಯಣನೊಬ್ಬನೇ ಪ್ರಳಯಕಾಲದಲ್ಲಿದ್ದವನೆಂದು ಅರ್ಥವಾಗುವುದರಿಂದ ಅವನಲ್ಲವೇ ಜಗತ್ಕಾರಣನು?

ದೀ - ( ಉಪಹಾಸದಿಂದ ) ಶ್ರೀಯವರೇ, ಇತ್ತ ಲಾಲಿಸಬೇಕು. ನೀವು ಹೇಳಿದ ಶ್ರುತಿಯಲ್ಲಿ ನಿರೂಪಿಸಲ್ಪಟ್ಟ ಶಬ್ದವು ಶಿವನನ್ನು ಬೋಧಿಸುತ್ತದೆ! ನಾವು ಹೀಗೆ ಸಾಧಿಸುತ್ತೇವೆ. 'ನಾರಾಯಣಶಬ್ದಃ ಶಿವಪರಃ ಶಿವವೃತ್ತಿಧರ್ಮಾವಚ್ಛಿನ್ನ ಪ್ರತಿಪಾದಕತ್ವಾತ್, ಶಿವಶಬ್ದವತ್' ಶಿವ ಎಂಬ ಶಬ್ದದಲ್ಲಿ ಶಿವವೃತ್ತಿ ಧರ್ಮಾವಚ್ಛಿನ್ನ ಪ್ರತಿಪಾದಕತ್ವವಿದೆ. ಶಿರಪರತ್ವವೂ ಇದೆ. ಆದ್ದರಿಂದ ನಾರಾಯಣ ಎಂಬ ಶಬ್ದದಲ್ಲಿ ಶಿವವೃತ್ತಿಧರ್ಮಾವಚ್ಛಿನ್ನ ಪ್ರತಿಪಾದಕತ್ವವಿರುವುದರಿಂದ ನಾರಾಯಣ ಶಬ್ದಕ್ಕೆ ಶಿವಪರತ್ವವನ್ನು ಸಾಧಿಸುತ್ತೇವೆ. ಇದೇ ಮುಂತಾದ ಪ್ರಮಾಣವಿರುವುದರಿಂದ ನಾರಾಯಣ ಶಬ್ದವು ಶಿವಪರವಾಗಬಹುದಲ್ಲ ಸ್ವಾಮಿ.

ಶ್ರೀ - ದೀಕ್ಷಿತರೇ, ನೀವು ಹೇಳಿದುದು ಸಮಂಜಸವಾಗಲಾರದು. ನಾವು ಮುಂದೆ ಪ್ರತಿಪಾದಿಸುವ ಕ್ರಮದಿಂದ ನಾರಾಯಣ ಶಬ್ದಕ್ಕೆ ಶಿವಪರತ್ವವು ಅಸಂಭಾವಿತವಾಗುವುದರಿಂದ ಬಾಧಿತವಾಗುವುದು. ಈ ಅನುಮಾನವು ಪಕ್ಷವಾದ ನಾರಾಯಣ ಶಬ್ದದಲ್ಲಿ ಶಿವವೃತ್ತಿಧರ್ಮಾವಚ್ಛಿನ್ನ ಪ್ರತಿಪಾದಕತ್ವರೂಪವಾದ ಹೇತುವು ಇರುವುದಿಲ್ಲ. ಏಕೆಂದರೆ - ನಾರಾಯಣ ಶಬ್ದಕ್ಕೆ ಕೇವಲ ಜಲಶಾಯಿತ್ವ ( ಸಮುದ್ರದಲ್ಲಿ ಮಲಗಿರುವಿಕೆ ) ಪ್ರವೃತ್ತಿ ನಿಮಿತ್ತವಲ್ಲ. ಆದರೆ ಪ್ರಳಯಕಾಲದ ಜಲಶಾಯಿತ್ವವೇ ಪ್ರವೃತ್ತಿ ನಿಮಿತ್ತವು. "ನಾರಾಯಣೋ ಇದಮಗ್ರ ಆಸೀತ್ ನ ಬ್ರಹ್ಮಾ ನ ಚ ಶಂಕರಃ" ಮುಂತಾದ ಪ್ರಮಾಣದಿಂದ ಶಂಕರನು ಪ್ರಳಯಕಾಲದಲ್ಲಿ ಜಲಶಾಯಿಯಾಗಿರಲಿಲ್ಲವೆಂದು ಸ್ಪಷ್ಟವಾಗಿರುವುದರಿಂದ ( ಶಿವನಲ್ಲಿ ಆ ಜಲಶಾಯಿತ್ವರೂಪಧರ್ಮವು ಬಾಧಿತವಾದ್ದರಿಂದ ) ಶಿವವೃತ್ತಿಧರ್ಮಾವಚ್ಛಿನ್ನ ಪ್ರತಿಪಾದಕತ್ವವು ನಾರಾಯಣ ಶಬ್ದದಲ್ಲಿ ಇಲ್ಲದಿರುವುದರಿಂದ ಅಸಿದ್ಧಿಯು. ಮತ್ತು 'ನಾರಾಯಣ ಶಬ್ದಃ ನ ಶಿವಪರಃ, ಶಿವಾನಧಿಕರಣಕಾಲವೃತ್ತ್ಯರ್ಥ ಪ್ರತಿಪಾದಕತ್ವಾತ್, ಯಃ ಯದನಧಿಕರಣ ಕಾಲವೃತ್ತ್ಯರ್ಥ ಪ್ರತಿಪಾದಕಃ ಸಃ ತತ್ಪರೋ ನ, ಯಥಾ ಘಟಾನಧಿಕರಣ ಕಾಲವೃತ್ತಿ ಘಟಧ್ವಂಸಪ್ರತಿಪಾದಕ ಘಟಧ್ವಂಸ ಶಬ್ದೋ ನ ಘಟ ಪರಃ' ಯಾವ ವಸ್ತುವು ಇಲ್ಲದೇ ಇರತಕ್ಕ ಕಾಲದಲ್ಲಿರತಕ್ಕ ವಸ್ತುವನ್ನು ಬೋಧಿಸುವ ಶಬ್ದವು ಆ ವಸ್ತುವನ್ನು ಬೋಧಿಸುವುದಿಲ್ಲ.

ದೀಕ್ಷಿತರೇ, ಇಲ್ಲಿ ಸ್ವಲ್ಪ ವಿಚಾರಮಾಡಿರಿ. ಘಟ ಇಲ್ಲದೇ ಇದ್ದ ಕಾಲದ ಘಟಧ್ವಂಸಬೋಧಕ ಶಬ್ದವು ಘಟವನ್ನು ಬೋಧಿಸುತ್ತದೆಯೇ ? ಇಲ್ಲ. ಅದರಂತೆಯೇ ಶಿವನು ಇಲ್ಲದೆ ಇದ್ದ ಪ್ರಳಯಕಾಲದಲ್ಲಿರತಕ್ಕ ವಿಷ್ಣುವನ್ನು ಬೋಧಿಸುವ ನಾರಾಯಣ ಶಬ್ದವು ಎಂದಿಗಾದರೂ ಶಿವನನ್ನು ಬೋಧಿಸುತ್ತದೆಯೇ? ನೀವೇ ಹೇಳಿ. ಹೀಗೆ ಪ್ರತಿಪಕ್ಷಾನುಮಾನವಿರುವುದರಿಂದ ಪ್ರಕರಣಸಮವು ಬರುವ ಕಾರಣ ನೀವು ಹೇಳಿದ ಅನುಮಾನದಿಂದ ನಾರಾಯಣ ಶಬ್ದವು ಶಿವಪರವೆಂದು ಸಾಧಿಸಲು ಶಕ್ಯವಲ್ಲ. ಇಷ್ಟೇ ಅಲ್ಲ; ವಿಶ್ರವಿಸಿನ ಅಪತ್ಯವೆಂಬ ಅರ್ಥದಲ್ಲಿ ನಿಷ್ಪನ್ನವಾದವುಗಳು ವೈಶ್ರವಣ, ರಾವಣ ಶಬ್ದಗಳು. ತಥಾ ಚ - ವೈಶ್ರವಣ(ಕುಬೇರ) ವೃತ್ತಿಯಾದ ವಿಶ್ರವಿಸಿನ ಅಪತ್ಯತ್ವ ರೂಪ ಧರ್ಮಾವಚ್ಛಿನ್ನಬೋಧಕವಾದ ರಾವಣ ಶಬ್ದವು ವೈಶ್ರವಣನನ್ನು ಬೋಧಿಸಬೇಕಾದೀತು!

ದೀ - (ಸ್ವಲ್ಪ ಅಸಮಾಧಾನದಿಂದ) ಭಲೆ! ಶ್ರೀಪಾದಂಗಳವರ ವಾದಶೈಲಿ, ಪ್ರತಿಪಾದನಾಕ್ರಮ ಬಹಳ ವಿದ್ವನ್ಮನೋರಂಜಕವಾಗಿದೆ. ಶ್ರೀಯವರು ಅನುಪಮ ವಾದಮಲ್ಲರೆಂದು ಹಿಂದೆಯೇ ನಾನು ಒಪ್ಪಿ ಬಿಟ್ಟಿದ್ದೇನಲ್ಲ! ಅದಿರಲಿ. ಇಷ್ಟಕ್ಕೆ ನನ್ನ ವಾದ ಮುಗಿಯಲಿಲ್ಲ. ಶ್ರೀಯವರಿತ್ತ ಗಮನಿಸಬೇಕು.

ಶ್ರೀ - ಆಗಬಹುದು, ಅದೇನು ಹೇಳೋಣವಾಗಲಿ.

ದೀ- ನಾರಾಯಣ ಶಬ್ದಕ್ಕೆ ಶಿವಪರತ್ವವು ಅಸಂಭಾವಿತ ಎಂದು ಹೇಳಿದಿರಿ. ಏಕೆ ಅಸಂಭಾವಿತ ಎಂಬುದನ್ನೂ ದಯಮಾಡಿ ಅಪ್ಪಣೆ ಕೊಡಿಸೋಣವಾಗಲಿ!

ಶ್ರೀ - ' ಪೂರ್ವಪದಾತ್ಸಂಜ್ಞಾಯಾಮಗಃ' ಎಂಬ ಪಾಣಿನಿ ಸೂತ್ರದಿಂದ 'ನಾರಾಯನಃ' ಎಂಬ ಶಬ್ದ ಘಟಕವಾದ 'ನ' ಕಾರಣಕ್ಕೆ 'ಣ' ಕಾರ ಬರುತ್ತದೆ. ಸಂಜ್ಞೆಯಲ್ಲಿ 'ಗ' ಕಾರದಿಂದ ವ್ಯವಧಾನವಿದ್ದರೆ ಬರುವುದಿಲ್ಲ ಎಂದು ಈ ಸೂತ್ರಾರ್ಥ. ಈಗ ನಾರಾಯಣ ಶಬ್ದಕ್ಕೆ ಶಿವನಲ್ಲಿ ಸಂಜ್ಞೆ ಇಲ್ಲದೇ ಇರುವುದರಿಂದ 'ಣ' ಕಾರ ಬರದೆ 'ನಾರಾಯನ' ಎಂದೇ ಆಗಬೇಕಾದೀತು! ಆದುದರಿಂದ 'ನಾರಾಯಣ' ಶಬ್ದಕ್ಕೆ ಶಿವ ಪರತ್ವವು ಅಸಂಭಾವಿತವು.

ದೀ- ( ನಗುತ್ತಾ ) 'ನ' ಕಾರಕ್ಕೆ 'ಣ' ಕಾರವನ್ನು ವಿಧಿಸುವ ಸೂತ್ರ ಅದೊಂದೇ ಅಲ್ಲ, ಶ್ರೀಗಳವರೇ! ಬೇರೆ ಸೂತ್ರದಿಂದ 'ಣ' ಕಾರವನ್ನು ನಾವು ತಂದುಕೊಡಬಲ್ಲೆವು.

ಶ್ರೀ - ಬಹಳ ಸಂತೋಷ! ಆದಾವ ಸೂತ್ರವು ?

ದೀ - ( ಆಶ್ಚರ್ಯತೆಯಿಂದ ) "ಅಟ್‌ಕುಪ್‌ವಾಜ್‌ನುಮ್ವ್ಯವಾಯೇಽಪಿ" ಎಂಬ ಸೂತ್ರದಿಂದ 'ಣ' ಕಾರ ಬರುತ್ತದೆ. ವ್ಯಸ್ತಗಳಾದ ಯಥಾಸಂಭವವಾಗಿ ಮಿಲಿತವಾದ ಸಮಾನಪದದಲ್ಲಿ ಅಟ್,

ಕವರ್ಗ, ಪವರ್ಗ, ಆಙ, ನುಮ್‌ಗಳಿಂದ ವ್ಯವಧಾನವಿದ್ದರೂ ರೇಫ, ಷಕಾರಗಳಿಂದ ಪರವಾದ 'ನ' ಕಾರಕ್ಕೆ 'ಣ'ಕಾರ ಬರುತ್ತದೆ ಎಂದು ಈ ಸೂತ್ರಕ್ಕೆ ಅರ್ಥ. ಸಮಾನಪದವಾದ ನಾರಾಯಣ ಪದವಲ್ಲಿರತಕ್ಕ 'ರ' ಕಾರದಿಂದ ಪರವಾದ 'ನ'ಕಾರಕ್ಕೆ ಅಟ್ ಪ್ರತ್ಯಾಹಾರ ಘಟಕ ವರ್ಣಗಳಿಂದ ವ್ಯವಧಾನವಿದ್ದರೂ 'ಣ' ಕಾರ ಬರುವುದರಿಂದ ನಾರಾಯಣ ಶಬ್ದಕ್ಕೆ ಶಿವಪರವೇಕೆ ಅಸಂಭಾವಿತ? ಹೇಳೋಣವಾಗಲಿ ಸ್ವಾಮಿ.

ಶ್ರೀ - ( ದೀಕ್ಷಿತರ ವಾದಕ್ಕೆ ತಲೆದೂಗಿ ಮುಗುಳು ನಗೆಯಿಂದ ) ಭಲೇ! ದೀಕ್ಷಿತರೇ, ಬಹಳ ದಿನ ಶ್ರಮವಹಿಸಿ ನಮ್ಮ ನಾರಾಯಣನನ್ನು ಕಬಳಿಸಲು ಹವಣಿಸಿ ಇಲ್ಲಿಗೆ ಬಂದಿದ್ದೀರಿ. ಪಾಪ, ನಿಮ್ಮ ಅಭೀಷ್ಟ ಪೂರ್ಣವಾಗುವುದಿಲ್ಲವಲ್ಲ ಎಂದು ನಮಗೆ ಅತ್ಯಂತ ವಿಷಾದವಾಗಿದೆ.

ದೀ- ( ಕಳವಳದಿಂದ ) ಅದೇಕೆ ಮಹಾಸ್ವಾಮಿ?

ಶ್ರೀ - ನಿಮ್ಮ ಪ್ರಯತ್ನ ನಿಷ್ಫಲವಾದ್ದರಿಂದ! ಕೇಳಿ, ನಾರಾಯಣ ಎಂಬಲ್ಲಿ 'ನಾರ' ಒಂದು ಪದ. 'ಅಯನ' ಮತ್ತೊಂದು ಪದ. ಅಂದಮೇಲೆ ಅದು ಸಮಾಸಪದವಾಗಲಿಲ್ಲ. ಆದ್ದರಿಂದ 'ನ'ಕಾರಕ್ಕೆ 'ಣ'ತ್ವವು ಹೇಗೆ ಬರುತ್ತದೆ?

ದೀ- ( ಸ್ವಲ್ಪ ಯೋಚಿಸಿ ) 'ಸುಪ್ತಿಙಂತಂ ಪದಂ' ಸುಬಂತ ತಿಙಂತವಾದುದು ಪದವಾದುದರಿಂದ ನಾರಾಯಣ ಶಬ್ದದ ಮೇಲೆ 'ಸುಪ್' ಪ್ರತ್ಯಯವಿರುವುದರಿಂದ ವಿಶಿಷ್ಟವೇ ಪದವಾದುದರಿಂದ ನಾರಾಯಣ ಪದವು ಸಮಾನಪದವಾಗಬಹುದು.

ಶ್ರೀ- ದೀಕ್ಷಿತರೇ, ಹಾಗೆ ವಿವಕ್ಷಾ ಮಾಡಿದರೆ 'ರಾಮನಾಮ, ಗಂಧರ್ವಗಾನಂ' ಮುಂತಾದ ಶಬ್ದಗಳಲ್ಲಿರತಕ್ಕ 'ನ' ಕಾರಕ್ಕೂ 'ಣ'ತ್ವ ಬರಬೇಕಾದೀತು! ಅದಕ್ಕಾಗಿ ನಿಮಿತ್ತಾನಧಿಕರಣ ನಿಮಿತ್ತಿಮತ್ವದಾಘಟಿತತ್ವರೂಪವಾದ ಪಾರಿಭಾಷಿಕ ಸಮಾನಪದತ್ವವನ್ನು ಪರಿಷ್ಕಾರ ಮಾಡಬೇಕು. ನಿಮಿತ್ತವಾದ ರೇಫಾನದಿಕರಣ ನಿಮಿತ್ತ 'ನ' ಕಾರ ಉಳ್ಳ ನಾಮ 'ಗಾನಪದಘಟಿತವಾದುದರಿಂದ ಉಕ್ತ ಸಮಾನಪದತ್ವವು 'ರಾಮ' ನಾಮ ಗಂಧರ್ವಗಾನಂ' ಎಂಬ ಪದದಲ್ಲಿ ಇಲ್ಲದಿರುವುದರಿಂದ 'ಣ'ಕಾರ ಬರುವುದಿಲ್ಲವೆಂದು ಹೇಳಬೇಕು. ಪ್ರಕೃತ-ನಾರಾಯಣಪದದಲ್ಲಿಯೂ ನಿಮಿತ್ತವಾದ ರೇಫವಿಲ್ಲದೇ ಇದ್ದ ನಿಮಿತ್ತವಾದ 'ನ'ಕಾರವುಳ್ಳ ಅಯನಪದಘಟಿತವಾದುದರಿಂದ ತದಘಟಿತತ್ವ ರೂಪ ಸಮಾನಪದತ್ವವು ನಾರಾಯಣ ಪದದಲ್ಲಿ ಇಲ್ಲದಿರುವುದರಿಂದ ನೀವು ಹೇಳಿದ ಸೂತ್ರದಿಂದ 'ನ'ಕಾರಕ್ಕೆ 'ಣ'ಕಾರವು ಬರಲಾರದು. ಅಂದಮೇಲೆ ನಾವು ಹೇಳಿದ ಸೂತ್ರದಿಂದಲೇ ಬರಬೇಕು. ಶಿವನಲ್ಲಿ ನಾರಾಯಣ ಶಬ್ದಕ್ಕೆ ಸಂಜ್ಞೆ ಇಲ್ಲದಿರುವ ಕಾರಣ 'ಣ' ಕಾರ ಬರುವುದಿಲ್ಲವಾಗಿ ನಾರಾಯಣ ಶಬ್ದಕ್ಕೆ ಶಿವಪರತ್ವವು ಅಸಂಭಾವಿತವು.

ದೀ - ( ಹೆಮ್ಮೆಯಿಂದ ) "ಣತ್ವ" ವಿರುವುದರಿಂದ ನಾರಾಯಣ ಶಬ್ದ ಶಿವಪರವಾಗಿಲ್ಲವೆಂದು ತಾವು ತಿಳಿದಂತಿದೆ. ಹಾಗಲ್ಲ. ನಾರಾಯಣ ಶಬ್ದಕ್ಕೆ ಶಿವಪರತ್ವವಿದ್ದರೂ 'ಣತ್ವ' ಬರಬಹುದು.

ಶ್ರೀ - ಅದು ಹೇಗೆ?

ದೀ- ಅದು ಹೀಗೆ ! -'ಉತ್ತರಪದತ್ವೇಚಾಪದಾದಿವಿಧೌ ಪ್ರತ್ಯಯಲಕ್ಷಣಪ್ರತಿಷೇಧಃ' ಎಂಬ 'ವಾರ್ತೀಕ' ವಿದೆ. ಉತ್ತರಪದಕ್ಕೆ ಪದತ್ವವ್ಯಪದೇಶವನ್ನು ವಿವಕ್ಷಾ ಮಾಡಿದರೆ ಪ್ರತ್ಯಯಲಕ್ಷಣ ಪ್ರತಿಷೇಧಃ ಅಂದರೆ - ಪ್ರತ್ಯಯಾಶ್ರಿತ ಕಾರ್ಯವನ್ನು ಮಾಡಬಾರದು, ಪದಾದಿ ಕಾರ್ಯಮಾಡುವಾಗ ಪ್ರತಿಷೇಧವಿಲ್ಲವೆಂದು ಅದರ ಅರ್ಥ. ಲುಪ್ತವಾದ ಪ್ರತ್ಯಯವನ್ನು ಆಶ್ರಯ ಮಾಡಿಕೊಂಡು ಕಾರ್ಯಮಾಡಲು ಬರುವುದಿಲ್ಲವಾದ್ದರಿಂದ 'ನಾರಾಯಣ' ಎಂಬಲ್ಲಿನ 'ಆಯನ' ಶಬ್ದವು 'ಸುಬಂತ' ವಾಗಲಿವಾದುದರಿಂದ ಅದು 'ಪದ' ವೆನಿಸಲಾರದು. ಅಂದಮೇಲೆ ನಿಮಿತವತ್‌ಪದ ಅಘಟಿತತ್ವರೂಪ ಸಮಾನಪದತ್ವವು 'ನಾರಾಯಣ' ಪದದಲ್ಲಿ ಬರುವುದರಿಂದ ಹಿಂದೆ ಹೇಳಿದ ಸೂತ್ರದಿಂದ 'ಣತ್ವ' ಬರುವುವಾದ್ದರಿಂದ ನಾರಾಯಣ ಪದವು ರುದ್ರಪರವಾಗಬಹುದಲ್ಲ! ಶ್ರೀಯವರು ಇದಕ್ಕೇನು ಹೇಳುವರು?

ಶ್ರೀ- ದೀಕ್ಷಿತರೇ, ನಿಮ್ಮೀ ವಾದವೇನೋ ಮನೋಜ್ಞವಾಗಿರುವಂತೆ ತೋರುತ್ತಿದ್ದರೂ ಪ್ರಕೃತ ಅದು ಸರಿಹೋಗುವುದಿಲ್ಲ.

ದೀ- ಅದೇಕೆ ಸರಿ ಹೋಗುವುದಿಲ್ಲ ಸ್ವಾಮಿ?

ಶ್ರೀ - ಹಾಗೆ ಹೇಳುವುದಾದರೆ - ನಿಮ್ಮ ಇದೂ ನ್ಯಾಯದಿಂದ "ರಾಮ ನಾಮ-ಗಂದರ್ವಗಾನಂ" ಮುಂತಾದ ಸ್ಥಳಗಳಲ್ಲಿಯೂ 'ನ' ಕಾರಕ್ಕೆ 'ಣತ್ವ' ಬರಬಹುದಲ್ಲವೇ? ಈ ಅತಿಪ್ರಸಕ್ತಿಯನ್ನು ಹೇಗೆ ಪರಿಹರಿಸುವಿರಿ?

ದೀ- ( ಮಂದಹಾಸದಿಂದ ) 'ಕ್ಷುಭ್ನಾದಿಪುಚ', 'ಏಷುಣತ್ವಂ ನಸ್ಯಾತ್' ಎಂದು ಪ್ರಮಾಣವಿದೆ. ಕ್ಷುಭ್ನಾದಿ ಗಣಪಠಿತವಾದ ಶಬ್ದಗಳಲ್ಲಿ 'ನ' ಕಾರಕ್ಕೆ 'ಣತ್ವ' ಬರುವುದಿಲ್ಲ. ಇದು ಆಕೃತಿಗಣವಾದ್ದರಿಂದ ಈ 'ರಾಮನಾಮ' ಮುಂತಾದ ಶಬ್ದಗಳನ್ನು ಆ ಗಣದಲ್ಲಿ ಸೇರಿಸಿದರೆ ಆಯಿತು! "ಣತ್ವ" ಪ್ರಸಕ್ತಿಯೇ ಇಲ್ಲವಲ್ಲ! ಆದುದರಿಂದ ಯಾವ ಅತಿಪ್ರಸಕ್ತಿ ಮೊದಲಾದ ದೋಷವೂ ಇಲ್ಲದಿರುವುದರಿಂದ 'ಯೋಗವೃತ್ತಿ' ವಿವಕ್ಷಾ ಮಾಡಿದಾಗ್ಯೂ 'ಣತ್ವ' ಬರಬಹುದಾದ್ದರಿಂದ ನಾರಾಯಣ ಶಬ್ದವು ರುದ್ರಪರವಾಗಬಹುದಾದ ಕಾರಣ ನಾರಾಯಣ ಶಬ್ದವಾಚ್ಯನು ನಮ್ಮ ರುದ್ರನೇ ಆದಂತಾಯಿತು!

ಶ್ರೀ - ನೀವು ಹೇಳಿದ್ದು ಯೋಗವೃತ್ತಿಯಿಂದ ಶಿವಪರತ್ವೇ ನಾರಾಯಣ ಶಬ್ದದಲ್ಲಿ 'ನ'ಕಾರಕ್ಕೆ 'ಣತ್ವ' ಬರುವುದಿಲ್ಲವೆಂದು ತಾತ್ಪರ್ಯವೇ? ಅಥವಾ ವಿಷ್ಣು ಪರತ್ವೇ 'ಣತ್ವ'ವು ಬರುವುದಿಲ್ಲವೆಂಬ ಆಶಯವೋ?

ದೀ- ( ಅನುಮಾನಿಸಿ ) ಮೊದಲ ಪಕ್ಷವೆಂದರೆ....?

ಶ್ರೀ - ( ನಕ್ಕು ) ಆದ್ಯ ಪಕ್ಷವಾದರೆ ಅದು ನಮಗೆ ಸಮ್ಮತ! ನಮ್ಮ ಮನೋರಥವೃಕ್ಷ ಫಲಿಸಿದಂತಾಯಿತು!

ದೀ- ( ಗಡಿಬಿಡಿಯಿಂದ ) ಅಲ್ಲ - ಅಲ್ಲ ಎರಡನೇ ಪಕ್ಷವೆನ್ನುವೆನು. ಅದಕ್ಕೇನೆನ್ನುವಿರಿ?

ಶ್ರೀ - ದೀಕ್ಷಿತರೇ, ಈ ಎರಡನೆಯ ಪಕ್ಷದಲ್ಲಿ ನಾರಾಯಣ ಶಬ್ದಕ್ಕೆ ವಿಷ್ಣುವಿನಲ್ಲಿ ಸಂಜ್ಞೆ ಇರುವುದರಿಂದ ಈ ನಿಯಮದಿಂದ 'ಣತ್ವ' ಬರುತ್ತದೆ. ಆದ್ದರಿಂದ ನಾರಾಯಣ ಶಬ್ದವು ವಿಷ್ಣುಪರವೇ ಹೊರತು ಶಿವಪರವಾಗಲಾರದೆಂದು ಹೇಳೋಣವಾಯಿತಲ್ಲವೆ?

ದೀ - ಹೌದು. ಈಗ ನೋಡಿ - ಷಟ್ ಪ್ರಶ್ನೋಪನಿಷತ್ತಿನಲ್ಲಿರುವ 'ಸಮುದ್ರಾಯಣ', 'ಪುರುಷಾಯಣ' ಶಬ್ದಗಳಲ್ಲಿರತಕ್ಕ 'ನ' ಕಾರಕ್ಕೆ 'ಣತ್ವ' ವನ್ನು ತಾವು ಹೇಳಬೇಕು. ಮತ್ತು ಆ ಪ್ರಯೋಗಗಳಿಗೆ ಸಾಧುತ್ವವನ್ನು ಹೇಳಬೇಕು. ಅಲ್ಲವೇ? ಅದರಂತೆಯೇ ನಾರಾಯಣ ಶಬ್ದಕ್ಕೆ ಶಿವಪರತ್ವದಲ್ಲೂ 'ಣತ್ವ' ಮತ್ತು ಸಾಧುತ್ವ ಬರಬಹುದಲ್ಲ !

ಶ್ರೀ - ಇದೇನು ದೀಕ್ಷಿತರೇ ಹೀಗೆ ಹೇಳುವಿರಿ? ಅವು ಛಾಂದಸ ಪ್ರಯೋಗಗಳಲ್ಲವೇ? ಅಲ್ಲಿ ಯಾವ ವಿಚಾರಕ್ಕೂ ಅವಕಾಶವೇ ಇಲ್ಲವಲ್ಲ! ಹಾಗೆ ಹೇಳದಿದ್ದರೆ 'ಮಾತೃಭೋಗೀಣ" ಶಬ್ದದಂತೆ ಆ ಶಬ್ದಗಳಿಗೂ ಲೋಕದಲ್ಲಿ ಪ್ರಯೋಗ ಬರಬೇಕಾದೀತು. ಮತ್ತು ನಾರಾಯಣ ಶಬ್ದಕ್ಕೆ ಮಹೇಶ್ವರನಲ್ಲಿ ಪ್ರಯೋಗವು ಇರುವುದಿಲ್ಲ.

ದೀ- ( ಸ್ವಲ್ಪ ಯೋಚಿಸಿ ) ನಾರಾಯಣ ಶಬ್ದಕ್ಕೆ ಶಿವನಲ್ಲಿ ಪ್ರಯೋಗವಿಲ್ಲವೆಂದು ತಾವು ಹೇಳಿದಿರಿ. ಆದರೆ 'ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಸ್ತುತೇ." ಎಂದು ವೈದಿಕ ಪ್ರಯೋಗವಿದೆಯಷ್ಟೇ?

ಶ್ರೀ - ಹೌದು ಇದೆ.

ದೀ - ಅಂದಮೇಲೆ ಸಿದ್ಧಂ ನಸ್ಸಮೀಹಿತಂ!

ಶ್ರೀ - ಅದೆಂತು ?

ದೀ - 'ನಾರಾಯಣೀ' ಪ್ರಯೋಗವಿದೆ. ಆದರೆ ಅಲ್ಲಿ ಸಾಕ್ಷಾತ್ ನಾರಾಯಣ ಶಬ್ದವು

ಶಿವಪರವಾಗಿ ಪ್ರಯುಕ್ತವಾಗಿಲ್ಲ. ಆದರೂ ಗೌರೀ ದೇವಿಗೆ ನಾರಾಯಣಿ ಎಂಬ ಪ್ರಯೋಗವಿರುವುದರಿಂದ ನಾರಾಯಣಿಯ ಪತಿ ನಾರಾಯಣ ಎಂದು ಹೇಳಿದರೆ ಶಿವಪರವೇ ಆದಂತಾಗುತ್ತದಲ್ಲ!

ಶ್ರೀ - ( ನಸುನಕ್ಕು ) ದೀಕ್ಷಿತರೇ, ನಿಮ್ಮಂಥವರೇ ಈ ಮಾರ್ಗ ಹಿಡಿಯಬಹುದೇ? ಅಲ್ಲ, ದೀಕ್ಷಿತರೇ, ನಾರಾಯಣಿಯ ಪತಿ ನಾರಾಯಣ ಎಂದರೆ ಲೋಕದಲ್ಲಿ ರಾಜನ ಪತ್ನಿಗೆ 'ಮಹಿಷಿ' ಎಂಬ ಪ್ರಯೋಗವಿದೆ ಎಂದು ಮಹಿಷಿಯ ಪತಿಯನ್ನು 'ಮಹಿಷ' ಎಂದು ಕರೆಯಲು ಸಾಧ್ಯವೇ?

ಶ್ರೀಯವರ ಚಮತ್ಕಾರ ಪೂರ್ಣವಾದ ಈ ಮಾತನ್ನು ಕೇಳಿ ಪಂಡಿತರು, ಸಭಾಸದರು ಮುಸಿ ಮುಸಿ ನಗಲಾರಂಭಿಸಿದರು. ದೀಕ್ಷಿತರು ತಲೆ ಕೆರೆದುಕೊಂಡು ತಾವೂ ನಕ್ಕುಬಿಟ್ಟರು.

ದೀ - ಪರವಾಗಿಲ್ಲ ಸ್ವಾಮಿ ನೀವು, ಮೆಲ್ಲಗೆ ನಮ್ಮ ಶಿವನನ್ನು 'ಮಹಿಷ' ಮಾಡಲು ಎಷ್ಟು ದಿನದಿಂದ ಹೊಂಚುಹಾಕಿದ್ದಿರಿ?

ಶ್ರೀ - ಶಾಂತಂ ಪಾಪಂ, ದೀಕ್ಷಿತರೇ, ರುದ್ರದೇವರನ್ನು ನಾವು ಅತ್ಯಂತ ಗೌರವಿಸುತ್ತೇವೆ. ನಮ್ಮ ಸಿದ್ಧಾಂತದಲ್ಲಿ ವಿಷ್ಣು ಭಕ್ತಾಗ್ರೇಸರನೆಂದು ಶಿವನಿಗೆ ದೊಡ್ಡ ಸ್ಥಾನವಿದೆ.

ದೀ - ( ವಾದವನ್ನು ಮುಂದುವರೆಸಿ ) 'ಶರಣ್ಯೇ' ಎಂಬ ಪ್ರಯೋಗದಲ್ಲಿ ಗೌರೀ ದೇವಿಯಲ್ಲಿ 'ನಾರಾಯಣಿ' ಎಂದು ಪ್ರಯೋಗವಿರುತ್ತದೆ. ಪುಂಯೋಗ ವಿವಕ್ಷಾ ಮಾಡಿದರೇನೇ 'ಪುಂಯೋಗಾದಾಖ್ಯಾಯಾಂ' ಎಂಬ ಸೂತ್ರದಿಂದ ಜೇಷ್ ಬರಬೇಕು. ಕಾರಣ ಅಲ್ಲಿ ಪ್ರಕೃತಿಯಿಂದ ನಾರಾಯಣ ಶಬ್ದವು ಶಿವಪರವೆಂದು ಅವಶ್ಯ ಹೇಳಲೇಬೇಕು.

ಶ್ರೀ - ಆ ಸೂತ್ರದಲ್ಲಿರತಕ್ಕ 'ಯೋಗ' ಶಬ್ದಕ್ಕೆ ಸಂಬಂಧವೆಂದು ಅರ್ಥ. ಆ ಸಂಬಂಧವು ( ದಂಪತೀ ಭಾವ ) ಪತಿ ಪತ್ನಿಯರದೇ ಆಗಿರಬೇಕೆಂಬ ನಿಯಮವೇನಿಲ್ಲ. ಜನ್ಯ ಜನಕಭಾವವೂ ( ತಂದೆ ಮಕ್ಕಳು ) ಆಗಿರಬಹುದು. ಆದ್ದರಿಂದ ನಾರಾಯಣನಿಂದ ಜನ್ಯಳು ಎಂದು ಅರ್ಥ ಹೇಳಬಹುದು. ತಥಾ ಚ ನಾರಾಯಣ ಶಬ್ದವು ಶಿವಪರವಾಗಲಾರದು. ನಾರಾಯಣನಿಂದ ಜನ್ಯಳು ಎಂದು ಹೇಳದೆ ಅಲ್ಲಿ ಪತಿ ಪತ್ನೀ ( ದಂಪತೀ ಭಾವ ) ಭಾವವನ್ನೇ ವಿವಕ್ಷಾ ಮಾಡುವುದುದಾದರೆ "ಪ್ರಾಕ್ಕೈಕಯೀತೋ ಭರತಸ್ತತೋ ಭೂತ" ಎಂಬುವ ಭಟ್ಟಿಯ ಪ್ರಯೋಗವೇ ಅಸಾಧುವಾಗಬೇಕಾದೀತು. ಕೇಕಯನ ಸುತಳು ಎಂಬ ಅರ್ಥದಲ್ಲಿ 'ಕೈಕಯಾ' ಎಂದು ಪ್ರಯೋಗ ಮಾಡಿದ್ದಾರೆ. ಪತಿ ಪತ್ನೀ ಭಾವವೇ ವಿವಕ್ಷಾ ಮಾಡಬೇಕೆಂದರೆ ಅದು ಇಲ್ಲಿ ಬಾಧಿತವಾಗುವುದು. ಆದುದರಿಂದ ಇಲ್ಲಿಯೂ ಸಹ ಜನ್ಯಜನಕಭಾವವನ್ನು ವಿವಕ್ಷಾ

ಮಾಡಬೇಕು ಅಂದಮೇಲೆ ನಾರಾಯಣ ಶಬ್ದವು ಹೇಗೆ ಶಿವಪರವಾಗಬಲ್ಲದು. ದೀಕ್ಷಿತರೆ?

ದೀಕ್ಷಿತರು, ಸಭಾಸದರು ಸಹಾ ಶ್ರೀಯವರ ಅಸದೃಶವಾದ ವ್ಯಾಕರಣ ಶಾಸ್ತ್ರದಲ್ಲಿನ ಪಾಂಡಿತ್ಯವನ್ನು ಶ್ಲಾಘಿಸುತ್ತಾ ಆನಂದದಿಂದ ಹರ್ಷೋದ್ಗಾರ ಮಾಡಿದರು.

ದೀ- ( ನಗುತ್ತಾ ) ಶ್ರೀಯವರು ಇಂದು ನನ್ನ ಯಾವ ವಾದವನ್ನೂ ನಿಲ್ಲಗೊಡುವುದಿಲ್ಲವೆಂದು ತೋರುತ್ತದಲ್ಲ. ಹೂಂ ಇರಲಿ. ಶಿವನ ಸರ್ವೋತ್ತಮತ್ವವನ್ನು ಬೇರೊಂದು ರೀತಿಯಿಂದ ಸಾಧಿಸುತ್ತೇನೆ.

ಶ್ರೀ - ಸಂತೋಷ ನಡೆಯಲಿ.

ದೀ - ಸ್ವಾಮಿ, ಕೂರ್ಮಪುರಾಣದಲ್ಲಿಯೂ ಶಿವಸಹಸ್ರ ನಾಮದಲ್ಲಿಯೂ ಶಿವನಲ್ಲಿ ನಾರಾಯಣ ಶಬ್ದಕ್ಕೆ ಪ್ರಯೋಗವು ಕಂಡಿರುವುದು. ಕೋಶಾದಿಗಳಂತೆ ಪುರಾಣಗಳು ಶಕ್ತಿಗ್ರಾಹವಾದುದರಿಂದ ನಾರಾಯಣ ಶಬ್ದಕ್ಕೆ ಶಿವನಲ್ಲಿ ಸಂಜ್ಞಾ ಹೇಳಬೇಕಾದ್ದರಿಂದ "ಪೂರ್ವಪದತ್ಸಂಜ್ಞಾಯಾಮಗಃ" ಎಂಬ ಸೂತ್ರದಿಂದ 'ಣತ್ವ' ಬರಬಹುದಾದ್ದರಿಂದ 'ನಾರಾಯಣ' ಶಬ್ದವೂ ಶಿವಪರವಾಗಬಹುದು. ಇದಕ್ಕೇನನ್ನುವಿರಿ ?

ಶ್ರೀ - ( ನಸುನಗುತ್ತಾ ) ದೀಕ್ಷಿತರೇ, ನಾರಾಯಣ ಶಬ್ದವು ವಿಷ್ಣು ಪರವೆಂದೀಗ ಸಿದ್ಧಾಂತಿಸುತ್ತೇವೆ.

ದೀ - ( ನಕ್ಕು ) ಓಹೋ ಹಾಗೇನು?

ಶ್ರೀ - ಇದು ಶ್ರೀಶೇಚ್ಛೆ! ಇತ್ತ ಕೇಳಿ. ದೀಕ್ಷಿತರೇ - ನೀವು ಹೇಳಿದ ಕೂರ್ಮ ಪುರಾಣಾದಿಗಳಲ್ಲಿ 'ದಂತ್ಯ' ಉಪಪದವಾಗಿರತಕ್ಕ 'ನಾರಾಯನ' ಶಬ್ದವು ಕಂಡಿದೆಯೇ ವಿನಃ 'ಮೂರ್ಧನ್ಯೋಪಪದ'ವಾದ ನಾರಾಯಣ ಶಬ್ದಕ್ಕೆ ಶಿವನಲ್ಲಿ ಪ್ರಯೋಗ ಕಂಡಿಲ್ಲವಾದ ಕಾರಣ ಆ ಪುರಾಣಾದಿಗಳಿಂದ ನಾರಾಯಣ ಶಬ್ದಕ್ಕೆ ಶಿವನಲ್ಲಿ ಸಂಜ್ಞೆಯು ಸಿದ್ಧಿಸಲಾರದು ಮತ್ತು 'ಮೂರ್ಧನ್ಯೋಪಪದ'ವಾದ ನಾರಾಯಣ ಶಬ್ದಕ್ಕೆ ಪ್ರಯೋಗ ಕಂಡಿದ್ದರೂ "ಸಂಪದಾಧಿಕ್ಯೇ ಪುರೋಹಿತೋಯಂ ರಾಜಾ ಸಂವೃತ್ತಃ' ಎಂಬಂತೆ ನಾರಾಯಣ ಶಬ್ದವು ಶಿವನಲ್ಲಿ ಔಪಚಾರಿಕವೆಂದು ಹೇಳಬಹುದು. ಏತೇನ ನಾರಾಯಣ ಶಬ್ದಕ್ಕೆ ಶಿವನಲ್ಲಿ ಸಂಜ್ಞೆಯು ಸಿದ್ಧಿಸಲಾರದು. ಇದರಂತೆಯೇ 'ಏಕವೃತ್ತಿಗೋಚರಃ ಸರ್ವೈರ್ವ್ಯವ ಹ್ರಿಯಮಾಣಃ ಶಬ್ದಃ ಸಂಜ್ಞೇತ್ಯುಚ್ಯತೇ" ಅಂದರೆ ಒಂದು ವಸ್ತುವಿನಲ್ಲಿ ಅನೇಕರಿಂದ ವ್ಯವಹರಿಸಲ್ಪಟ್ಟ ಶಬ್ದಕ್ಕೆ ಅಲ್ಲಿ ಸಂಜ್ಞೆಯುಂಟೆಂದು ಹೇಳಬೇಕು. ಹೀಗೆ ಹೇಳದಲ್ಲಿ "ಸರ್ವಾದೀನಿ ಸರ್ವನಾಮಾನಿ" ಎಂಬ ಸ್ಥಳದಲ್ಲಿಯೂ ಕೂಡ 'ಣತ್ವ' ಬರಬೇಕಾದೀತು! ಇನ್ನು ನಾರಾಯಣ ಶಬ್ದವು ವಿಷ್ಣುವಿನಲ್ಲಿ

ಅನೇಕರಿಂದ ಪ್ರಯೋಗಿಸಲ್ಪಟ್ಟಿದ್ದಾಗಿ ಕಂಡಿದೆಯೇ ಹೊರತು ಶಿವನಲ್ಲಿ ಪ್ರಯೋಗಿಸಲ್ಪಟ್ಟಿದ್ದಾಗಿ ಕಂಡುಬರುವುದಿಲ್ಲ. ಆದುದರಿಂದ ನಾರಾಯಣ ಶಬ್ದಕ್ಕೆ ಶಿವನಲ್ಲಿ ಸಂಜ್ಞೆ ಇರುವುದಿಲ್ಲವಾದ್ದರಿಂದ 'ನ' ಕಾರಕ್ಕೆ 'ಣತ್ವ'ವು ಬರಲಾರದು. ಯಾವ ವಿಧದಿಂದಲೂ ನಾರಾಯಣ ಶಬ್ದವು ಶಿವ ಪರವಾಗುವುದಿಲ್ಲವಾದುದರಿಂದಲೂ ನಾರಾಯಣ ಶಬ್ದವು ವಿಷ್ಣುಪರವೇ ( ನಾರಾಯಣ ಪರವೇ ) ಆಗುವುದರಿಂದ ನಾವು ವಾದ ಪ್ರಾರಂಭದಲ್ಲಿ ಹೇಳಿದಂತೆ ಸರ್ವವೇದಪ್ರತಿಪಾದ್ಯನೂ, ಸಕಲಗುಣ ಪರಿಪೂರ್ಣನೂ, ಸರ್ವದೇವ ವಂದ್ಯನೂ, ಆದ ಶ್ರೀಮನ್ನಾರಾಯಣನೇ ಸರ್ವಸ್ವತಂತ್ರನೂ ಮತ್ತು ಜಗಜ್ಜನ್ಮಾದಿ ಕಾರಣನೂ ಆದುದರಿಂದ ಅವನೇ, ಸರ್ವೋತ್ತಮನು ಎಂದು ಸಿದ್ಧಿಸಿತು.

ಹೀಗೆ ಅನೇಕ ಪ್ರಮಾಣೋದಾಹರಣಪೂರ್ವಕವಾಗಿ ತಮ್ಮ ವಾದವನ್ನು ಶ್ರೀಯವರು ನಿರರ್ಗಳವಾಗಿ ಪ್ರತಿಪಾದಿಸಲು ದೀಕ್ಷಿತರು ಏನು ಹೇಳಲೂ ತೋಚದೆ ನಿರ್ವಿಕಾರ ಮನಸ್ಸಿನಿಂದ ಶ್ರೀಯವರ ಪಾಂಡಿತ್ಯವನ್ನು ಕೊಂಡಾಡಿ ನಸುನಗುತ್ತಾ ಮೇಲೆದ್ದು ಶ್ರೀಯವರಿಗೆ ಹೇಳಿದರು : "ಸ್ವಾಮಿ ಈಗ ನಿಮಗೆ ತೃಪ್ತಿಯಾಯಿತೇ? ಹೂಂ, ಶಿವನಿಚ್ಛೆ ಹೀಗೇ ಇದ್ದರೆ ನಾನೇನು ಮಾಡಲಿ? ಎಷ್ಟಾದರೂ ನೀವು ಪರಮಹಂಸಾಶ್ರಮಿಗಳು, ಇಕೋ ನನ್ನ ವಂದನೆ ಸ್ವೀಕರಿಸಿ ಆಶೀರ್ವದಿಸಿರಿ."



**ಅನುಬಂಧ - ೪**

ಅನು. ನಂ

## ಹರಿದಾಸರ ಹಾಡುಗಳ ಅಕಾರಾದಿ ಸೂಚಿ


ಆರಿಂದ ಸ್ತುತಿಸಲೊಶ ಶ್ರೀ ರಾಘವೇಂದ್ರಾಂಘ್ರಿ ( ಸುಜಯೀಂದ್ರರು ) ೬೫
ಇಂದು ನೋಡಿದೆ ಸುಶೀಲೇಂದ್ರ ಗುರುಗಳ ೫೭
ಉಡುರಾಜಮುಖಿಯೆ ಕೇಳ್ ೬೪
ಎಂದು ಕರುಣದಿಂದ ನೋಡುವಿ ಧೀರೇಂದ್ರಗುರುವೇ ೪೧
ಎಣೆಯಾರೊ ನಿಮಗೆ ಕುಂಭಿಣಿಯ ( ವಾದೀಂದ್ರ ) ೨೪
ಕಂಡೆಕಂಡೆನೊ ಕಂಗಳಲಿ ( ವಾದೀಂದ್ರ ) ೨೩
ಕರವೊಡ್ಡಿ ಬೇಡುವೆ ಗುರು ವಿಜಯೀಂದ್ರ ೧೧
ಕರುಣಿಸೊ ಶ್ರೀ ಗುರುರಾಜಾ ೧೮
ಗರಳಾಪುರದಿ ಮೆರೆವ ಗುರು ಸುಬೋಧೇಂದ್ರರ ೫೦
ಗುರುಗಳ ನೋಡಿರ್ಯೆ ಉತ್ತಮ ವರಗಳ ಬೇಡಿರ್ಯೆ ( ಭುವನೇಂದ್ರ ) ೪೭
ಗುರುಗಳನನುದಿನ ನೆನೆವೆ ನಾ ೧
ಗುರುಪರಂಪರೆ ಸ್ಮರಿಸೊ ೨
ಜೋ ಜೋ ವಾದೀಂದ್ರ ಕರಕಮಲೋದ್ಭವ ( ವರದೇಂದ್ರ ) ೩೮
ತರಣಿಕಲೋತ್ಪನ್ನ ತಪುತ ಕಾಂಚನವರ್ಣ ( ವಸುಧೇಂದ್ರ ) ೨೬
ತಿರುನೆಲ್ವೇಲಿ ಮರೆವ ಶ್ರೀ ವಿಬುಧೇಂದ್ರರ ೩
ದಯದಿ ಪಿಡಿಯೊ ಕೈಯ್ಯ ಸುಪ್ರಜ್ಞೇಂದ್ರರಾಯ ೨೫
ದಶದಿಶದೊಳು ಯಶ ಪಸರಿಸಿ ರಾಜಿಪ ಸುಶಮೀಂದ್ರ ೬೬
ಧೀರೇಂದ್ರ ಗುರುಗಳ ಚಾರುಚರಣ ಸ್ಮರಿಸಿರೋ ೪೪
ನಮಿಸಿ ಬೇಡುವೆ ಗುರುವೆ ಶ್ರೀ ಸುಜನೇಂದ್ರ ೫೧
ನಮಿಸುವೆನು ಭುವನೇಂದ್ರ ಗುರುರಾಯಾ ೪೯

| | ಅನು. ನಂ |
|---|---|
| ನಮಿಸುವೆನು ಸುವ್ರತೀಂದ್ರ ಯತಿಗಳಿಗೆ ಸತತ | ೬೨ |
| ನೋಡಿದ್ಯಾ ಇವರ ಪಾದ ಕೊಂಡಾಡಿದ್ಯಾ ( ಜಿತಾಮಿತ್ರರು ) | ೫ |
| ಪಂಪಾಕ್ಷೇತ್ರದಿ ಇರುವಾ ಶ್ರೀ ರಘುನಂದನ | ೬ |
| ಪಾಹಿ ಪಾಹಿ ಜಿತಮಾರ ಪಾಹಿ ಸುಬೋಧೇಂದ್ರ | ೪೯ |
| ಭುವನೇಂದ್ರ ಯತಿರತ್ನ ಭುವನಪಾವನ್ನ | ೪೬ |
| ಮರೆಯ ಹೊಕ್ಕೆನೊ ನಿನ್ನ.... ಧೀರೇಂದ್ರರಾಯಾ | ೪೨ |
| ಯತಿದ್ವಯರನ ಸ್ಮರಿಸೋ ( ಧೀರೇಂದ್ರ, ಸುಶೀಲೇಂದ್ರರು ) | ೫೯ |
| ಯತಿವರ ನಿಮ್ಮನು ಸ್ತುತಿಪ | ೧೭ |
| ಯತಿಶಿರೋಮಣಿಯಾದ ವರದೇಂದ್ರ ಗುರುರಾಯ | ೩೬ |
| ರಜತ ತುಲಾಭಾರ ವಿಜಯೋತ್ಸವದ.... ಸುಶಮೀಂದ್ರರ | ೬೮ |
| ರಾಘವೇಂದ್ರ ಸಲಹೋ ಗುಣಸಾಂದ್ರ | ೧೫ |
| ಲಾಲಿ ಲಾಲಿ ಗುರು ಧೀರೇಂದ್ರವರ್ಯಾ | ೪೩ |
| ವಂದನೆ ಮಾಡಿರೈ ಗುರು ವಸುಧೇಂದ್ರರ ಪಾಡಿರೈ | ೨೮ |
| ವಂದನೆ ಮಾಡಿರೈ ಯತಿಕುಲಚಂದ್ರನ ( ಜಿತಾಮಿತ್ರ ) | ೪ |
| ವಂದಿಸುವೆ ಶ್ರೀ ಮಂತ್ರಮಂದಿರದಿ ರಾಜಿಪರ ..... ಸುಧರ್ಮೇಂದ್ರರ | ೫೩ |
| ವರದಾತೀರದಿ ನೆಲಸಿಹ ಗುರುವರನ್ಯಾರೆ ( ಸುಶೀಲೇಂದ್ರ ) | ೬೦ |
| ವರದಾತೀರದಿ ಶೋಭಿಪ ಯತಿವರನ್ಯಾರೆ ( ಧೀರೇಂದ್ರ ) | ೪೦ |
| ವರದೇಂದ್ರ ಗುರು ನಿಮ್ಮ ಚರಣ ಸರಸೀರುಹ | ೩೪ |
| ವರದೇಂದ್ರ ತೀರ್ಥರ ಪದಧ್ಯಾನ ಮುಕ್ತಿ ಮಾರ್ಗಕೆ ಸೋಪಾನ | ೩೭ |
| ವರದೇಂದ್ರಯತಿ -ಚಕ್ರವರ್ತಿ ನಿರಂತರ ವರ್ಣಿಸುವೆ | ೨೯ |
| ವರದೇಂದ್ರಾರ್ಯರ ಪಾದಸರಸಿಜಯುಗ | ೩೧ |
| ವರಮಂತ್ರಾಲಯದೊಳು ಘನವಾಗಿ ನೆಲಸಿರ್ಪ | ೧೬ |

| | ಅನು. ನಂ |
|---|---|
| ವರ್ಣಿಸಲು ಸಾಧ್ಯವೇ ಧರೆಯೊಳಿನ್ನು ವರದೇಂದ್ರ ಗುರು | ೩೯ |
| ವಶವಲ್ಲ ವರ್ಣಿಸಲು ಸುಶೀಲೇಂದ್ರತೀರ್ಥರ | ೬೧ |
| ವಾದೀಂದ್ರ ಗುರುರಾಜಾ ನಿನ್ನ ಪಾದವ ತೋರಿಸಯ್ಯಾ | ೨೫ |
| ವಿಜಯೀಂದ್ರ ಮುನೀಂದ್ರರೆಂಬಾಶ್ಚರ್ಯದ ಗಜೇಂದ್ರ | ೯ |
| ವಿಜಯ ಮೂರುತಿ ಪೊರೆಯೊ ವಿಜಯೀಂದ್ರ ಯತಿವರ್ಯ | ೧೯ |
| ವಿಜಯೀಂದ್ರ ಮೌನಿಯ ಶ್ರೀ ವಾರಿಜಾಂಘ್ರಿಗಳ | ೧೩ |
| ವೃಂದಾರಕೇಂದ್ರಯತಿ ವೃಂದಾರಕೇಂದ್ರಪ್ರತಿ ( ವರದೇಂದ್ರ ) | ೨೨ |
| ಶ್ರೀ ಗುರು ಯೋಗೀಂದ್ರ ತೀರ್ಥಾರ್ಯಾ | ೧೯ |
| ಶ್ರೀ ಗುರು ಸುಗುಣೇಂದ್ರತೀರ್ಥರ ಪದಕಮಲ | ೫೪ |
| ಶ್ರೀಗುರು ಸುಮತೀಂದ್ರಗಭಿನಮಿಪೆ | ೨೧ |
| ಶ್ರೀ ವರದೇಂದ್ರಗೆ ನಮೋ ನಮೋ | ೩೫ |
| ಶ್ರೀ ವಿಜಯೀಂದ್ರಯತಿಯ ನಾ ಕಂಡೆ ಮುದಗೊಂಡೆ | ೮ |
| ಶ್ರೀ ಸುಧೀಂದ್ರತೀರ್ಥ ಯತಿರಾಜರ ಚರಣ | ೧೪ |
| ಶ್ರೀ ಸುಯಮೀಂದ್ರರ ಚರಣಕಮಲ ಭಜಿಸೂ | ೬೩ |
| ಶ್ರೀ ಸುರೇಂದ್ರರ ಪಾದ ತೋಷದಲಿ ತುತಿಪೆ | ೭ |
| ಶ್ರೀ ಮಧ್ವಮತವೆಂಬ ಕ್ಷೀರಾಪಾರವಾರ ( ಭುವನೇಂದ್ರರು ) | ೪೮ |
| ಸುಕೃತೀಂದ್ರ ಯತಿವರರ ಭಕುತಿಯಲಿ ಭಜಿಸೂ | ೫೬ |
| ಸುಜ್ಞಾನೇಂದ್ರಾರ್ಯ ಗುರುಶ್ರೀ | ೫೨ |
| ಸುಶೀಲೇಂದ್ರ ಸುಶೀಲೇಂದ್ರ ಪುಶಿಯ ವಾದಿಕರಿವೃಂದ ಮೃಗೇಂದ್ರ | ೫೮ |
| ಸೂರೀಂದ್ರ ಸೂರೀಂದ್ರ ಸೂರಿ ಜನರಿಂದಾರಾಧಿತ | ೨೦ |
| ಸೂರ್ಯಾ ಸುಗುಣಾರ್ಯಾ ಶ್ರೀ ವಿಜಯೀಂದ್ರಾರ್ಯಾ | ೧೦ |
| ಹಿಂಗದೆ ನೀ ಭಜಿಸೋ ಈ ಮೌನಿಪದಗಳ ( ಉಪೇಂದ್ರರು ) | ೨೨ |
| ಹಿಂದಿನ ಸುಕರ್ಮವೇನೊ ಬಂದೊದಗಿದವೊ ವರದೇಂದ್ರರಾಯರ | ೩೦ |

# ಹಾವನೂರಿನ ಶ್ರೀ ವಾದಿರಾಜ ಮೃತ್ತಿಕಾ ವೃಂದಾವನ ಶ್ರೀಮಠದ ಪರಿಚಯ

ತುಂಗಭದ್ರೆಯ ದಡದ ಮೇಲೆಯೇ ಇರುವ ಶ್ರೀ ವಾದಿರಾಜ ಮೃತ್ತಿಕಾ ವೃಂದಾವನವು ಸುಮಾರು ೧೨೦ ವರ್ಷಗಳ ಹಿಂದೆ ಸ್ಥಾಪಿತವಾಗಿದ್ದು, ನಾಡಿನಲ್ಲಿರುವ ಹಲವೇ ಮೃತ್ತಿಕಾ ವೃಂದಾವನಗಳಲ್ಲಿ ಪ್ರಾಚೀನತಮವೆನ್ನಬಹುದು. ಸುಮಾರು ಏಳು ದಶಕಗಳ ಹಿಂದೆ ಬೆಳಗಾಂವಕರ ಮನೆತನದವರು ನಮ್ಮ ತಂದೆ ಶ್ರೀ ಗಲಗಲಿ ನರಸಿಂಹಾಚಾರ್ಯರಿಗೆ ಪೂಜಾದಿ ಸೇವಾರ್ಥ ಶ್ರೀಮಠವನ್ನು ಒಪ್ಪಿಸಿ ಕೊಟ್ಟರು. ನಮ್ಮ ಪೂಜ್ಯ ತಂದೆಯವರು ಆಜೀವ ಪರ್ಯಂತ ಎಂದರೆ ೧೯೯೧ರ ವರೆಗೆ ಶ್ರೀ ಗುರುಗಳ ಸೇವೆ ಮಾಡಿದ್ದನ್ನು ನಾವು ಮುಂದವರಿಸಿಕೊಂಡು ಬಂದಿದ್ದೇವೆ.

ಶ್ರೀಮಠದ ಜೀರ್ಣೋದ್ಧಾರ, ಅದರಂತೆ ವಿಸ್ತರಣ ಕಾರ್ಯವನ್ನು ಕೈಕೊಳ್ಳಲಾಗಿದೆ. ಮಠದ ಸುತ್ತಮುತ್ತ ವಿಶಾಲವಾದ ಅಂಗಣವಿದ್ದು, ಅದರ ಹಿಂದೆ ಸಸ್ಯಕಾಶಿ ಇದೆ. ಕೀರ್ತನ ಮುಂತಾದ ಕಾರ್ಯಕ್ರಮಗಳಿಗೆಂದು ಸಭಾಮಂಟಪವಿದೆ.

ಈ ಮಧ್ಯೆ ಪೇಜಾವರ ಮಠದ ಶ್ರೀ ವಿಶ್ವಶತೀರ್ಥರು ಹಾಗೂ ಕೂಡಲಿ ಶ್ರೀ ಆರ್ಯ ಅಕ್ಷೋಭ್ಯತೀರ್ಥ ಮಠದ ಶ್ರೀಗಳವರು ಹಾಗೂ ಈಚೆಗೆ ಶ್ರೀ ಸತ್ಯಾತ್ಮತೀರ್ಥರುಇಲ್ಲಿಯ ಮಠವನ್ನು ಸಂದರ್ಶಿಸಿ ಸಂತೋಷ ವ್ಯಕ್ತಪಡಿಸಿ ನಮ್ಮನ್ನು ಆಶೀರ್ವದಿಸಿದ್ದಾರೆ.

ಫಾಲ್ಗುಣ ವದ್ಯ ತೃತೀಯೆಯಂದು ನಡೆಯುವ ಆರಾಧನೆಯ ಕಾಲಕ್ಕೆ ಹೋಮಹವನ, ಪ್ರವಚನ, ಭಕ್ತಿ ಸಂಗೀತ ಮುಂತಾದ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುವಂತೆ ಗುರುಗಳು ಅನುಗ್ರಹಿಸಿದ್ದು ನಮ್ಮ ಭಾಗ್ಯ.

ಶ್ರೀಮಠದ ವತಿಯಿಂದ ಗ್ರಂಥ ಪ್ರಕಟನ ಕಾರ್ಯವನ್ನೂ ಕೈಗೊಂಡಿದ್ದು, ಈವರೆಗೆ ಶ್ರೀ ವಾದಿರಾಜರ ಸ್ತುತಿಪರ ಹಾಡುಗಳು, ಅದರಂತೆ ಸವಣೂರಿನ ಶ್ರೀ ಸತ್ಯಬೋಧರ ಮೇಲಿನ ಕೀರ್ತನೆಗಳು ಹಾಗೂ ಸೋದೆಮಠದ ಶ್ರೀ ವಿಶ್ವೇಂದ್ರತೀರ್ಥರ 'ಕೀರ್ತನಮಂಜರಿ' ಪ್ರಕಟವಾಗಿದೆ. ಶ್ರೀ ವಾದಿರಾಜರ 'ತೀರ್ಥಪ್ರಬಂಧ'ದ ಪರಿಚಯ ಪುಸ್ತಕವೂ ಲಭ್ಯ.

**ಗಲಗಲಿ ಬಂಧುಗಳು**

---

ವಿಳಾಸ : ಶ್ರೀ ಪುರುಷೋತ್ತಮ ಗಲಗಲಿ, ಅರ್ಚಕರು,
ಅಂಚೆ : ಹಾವನೂರ, ಜಿಲ್ಲ ಹಾವೇರಿ - ೫೮೧ ೧೩೩.
ದೂರವಾಣಿ : (೦೮೩೭೫) ೨೫೪೦೭.

ಶ್ರೀ ವಾದಿರಾಜರ ಮೃತ್ತಿಕಾ ವೃಂದಾವನ ಮಠ, ಹಾವನೂರ

## ಪ್ರಕಟನೆಗಳು

| | |
|---|---|
| ಹರಿದಾಸರು ಹಾಡಿ ಹೊಗಳಿದ ಶ್ರೀ ವಾದಿರಾಜರು | ರೂ. ೬೦ |
| ಹರಿದಾಸರು ಸ್ತುತಿಸಿದ ಶ್ರೀ ಸತ್ಯಬೋಧರು | ರೂ.೩೦ |
| ಸೋದೆಯ ಶ್ರೀ ವಿಶ್ವೇಂದ್ರತೀರ್ಥರ ಕೀರ್ತನ ಮಂಜರಿ | ರೂ. ೩೦ |
| ಶ್ರೀ ವಾದಿರಾಜರ ತೀರ್ಥಪ್ರಬಂಧ ಕೃತಿ ಸಮೀಕ್ಷೆ | ರೂ. ೧೫ |
| ಹರಿದಾಸರು ಸ್ತುತಿಸಿದ ಶ್ರೀ ಮಂತ್ರಾಲಯ ಮಠದ ಯತಿವರ್ಯರು | ರೂ. ೮೦ |

ಪ್ರಾಪ್ತಿ ಸ್ಥಾನ :

ಡಾ. ಶ್ರೀನಿವಾಸ ಹಾವನೂರ

36 ವಿನಾಯಕ ಲೇಔಟ್, ವಿಜಯನಗರ III

ಬೆಂಗಳೂರು - 40. ಫೋನ್- 3384529

ಹರಿದಾಸರು ಚಿತ್ರಿಸಿದ
ಮಂತ್ರಾಲಯ ಮಠದ ಯತಿವರ್ಯರು

ವೈಶಿಷ್ಟ್ಯಗಳು

೧. ಮಂತ್ರಾಲಯ ಮಠದ ಶ್ರೀ ಸುಶಮೀಂದ್ರರ ವರೆಗಿನ ಯತಿವರ್ಯರನ್ನು ಸ್ತುತಿಸಿದ ಕೀರ್ತನೆಗಳ ಸಂಗ್ರಹ.

೨. ಶ್ರೀ ಶ್ರೀಪಾದರಾಜರಿಂದ ಮೊದಲುಗೊಂಡು ಸದ್ಯದ ಲಕುಮೀಶರ ವರೆಗಿನ ೩೦ ಜನ ಹರಿದಾಸರು ರಚಿಸಿದ ಕೀರ್ತನೆಗಳಿವು.

೩. ಜೊತೆಗೆ ಯತಿವರ್ಯರ ಸಂಕ್ಷಿಪ್ತ ಚರಿತ್ರೆ ಕೊಟ್ಟಿದೆ. ('ಗುರುಚರಿತೆ'ಯ ಆಧಾರದಿಂದ).

೪. ಶ್ರೀ ರಾಘವೇಂದ್ರ ಯತಿವರ್ಯರನ್ನು ಅನ್ಯ ಯತಿಗಳೇ ಸ್ತುತಿಸಿದ ನಾಲ್ಕು ಅಪೂರ್ವ ಕೃತಿಗಳಿವೆ.

೫. ಅನುಬಂಧವಾಗಿ ಶ್ರೀ ವಿಜಯೀಂದ್ರತೀರ್ಥರು ಶ್ರೀ ಅಪ್ಪಯ್ಯ ದೀಕ್ಷಿತ ಅವರೊಡನೆ ನಡೆಸಿದ ವಾಗ್ವಾದದ ಮಾದರಿ ಇದೆ.

೬. ಆರಂಭದಿಂದ ಇದುವರೆಗಿನ ಮಂತ್ರಾಲಯ (ವಿದ್ಯಾ) ಮಠದ ಯತಿವರೇಣ್ಯರ ಕಾಲಾನುಕ್ರಮ ಪೀಳಿಗೆಯ ದೊಡ್ಡ ನಕ್ಷೆ ಇದೆ.

ಪ್ರಕಾಶಕರು
ಹಾವನೂರ ಶ್ರೀವಾದಿರಾಜ ಮೃತ್ತಿಕಾ ವೃಂದಾವನ ಮಠ
ಮತ್ತು
ಶ್ರೀ ಕನಕ ಸಾಹಿತ್ಯ ಪ್ರತಿಷ್ಠಾನ (ರಿ.) ಬೆಂಗಳೂರು